# PACKAGE TOURS

**Hotel Room Accom. & South Indian Veg. Food**

## Shaktipeetha Manali Special : 18 Days

**Mar 15**



Wagah Border [Indo-Pak Border], Amritsar, Vaishnavi Devi, Chamunda, Kangra, Chintapurni, Jwalamukhi, Baijnath, Kullu-Manali, Vasista, Rohtang Pass [Optional], Naina Devi, Kufri, Shimla, Chandigarh, Kurukshetra, New Delhi

## South India : 10 Days

**Nov 27 Jan 28**



Guruvayur, Kaladi, Trivandram, Suchindram, Kovalam, Kanyakumari, Rameshwaram, Madurai, Srirangam, Tanjore, Kumbakonam, Chidambaram, Thiruvannamalai, Navagraha Temples

## Mini Andhra : 05 Days

**Nov 22 Dec 09**



Mantralaya, Srishailam, Mahanandi, Ahobila, Nava Narasimha Temples (Jwala, Pavana, Malola, Kroda, Karanja, Bhargava, Yogananda, Chatravata & Pavana)

## Dwarka & Jyothirlinga : 24 Days

**Jan 28**



Pushkar, Ajmer, Nathadwar, Kankroli, Eklingji, Udaipur, Mt. Abu, Mathrugaya, Dwarka, Bet Dwarka, Nagesham, Mul Dwarka, Porbandar, Veraval, Somnath, Dakor, Ahmedabad, Ujjain, Omkareshwar, Parli, Aurangabad, Ellora, Grishneshwar, Triyambak, Nasik, Shani Singanapur, Shirdi, Bhimashankar.

## INTERNATIONAL TOURS







**Dubai, Singapore, Malaysia, Thailand, Sri Lanka**



# Shri Hansaa Travels

**Recognised by Department of Tourism, Govt. of Karnataka**

: 640, 40th Cross, 8th Block, Jayanagar, Bangalore - 70

: hansaatravels@gmail.com : hansaatravels.com

080-26643276 / 26543891 / 9341215612 / 9341415612

ವ್ಯವಸ್ಥಾಪಕ ಸಂಪಾದಕರು
ಸ್ವಾಮಿ ಮುಕ್ತಿದಾನಂದ
ಸಂಪಾದಕರು
ಸ್ವಾಮಿ ಜ್ಞಾನಯೋಗಾನಂದ
ನೆರವು:
ಆರ್. ಎಸ್. ಪೂರ್ಣಾನಂದ
ಡಾ. ಕೆ. ಎಲ್. ಪ್ರಸನ್ನಾಕ್ಷಿ
ಡಾ. ಎಚ್. ಪಾಂಡುರಂಗ ವಿಠಲ

ಅಕ್ಷರ ಜೋಡಣೆ
ಶ್ರೀರಾಮಕೃಷ್ಣ ಆಶ್ರಮ, ಮೈಸೂರು
ಮುದ್ರಣ
ಮಯೂರ್ ಗ್ರಾಫಿಕ್ಸ್, ಬೆಂಗಳೂರು

E-mail:
vivekaprabha@hotmail.com
kannada.vivekaprabha@gmail.com
Website: vivekaprabha.net
ಫೋನ್ : 9481533505

ಮುಖಪುಟ:
ವಾಮನಾವತಾರ

ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ

ಚಂದಾ ವಿವರ

ಬಿಡಿ ಪ್ರತಿ: ₹ 14
ವಾರ್ಷಿಕ: ₹ 140
ಮೂರು ವರ್ಷ: ₹ 375
ಆಜೀವ (25 ವರ್ಷ): ₹ 3,000
ಪೋಷಕರು: ₹ 5,000 ಅಥವಾ ಹೆಚ್ಚು.

ವಿದೇಶಗಳಿಗೆ: (ಏರ್‌ಮೇಲ್)
ವಾರ್ಷಿಕ: $ 20; ಮೂರು ವರ್ಷ: $ 60
ಆಜೀವ (25ವರ್ಷ): $ 300
ಪೋಷಕರು: $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

ನವೆಂಬರ್-2015 ಸಂಪುಟ 16 ಸಂಚಿಕೆ 11



# ವಿವೇಕ ಪ್ರಭ

## ಪರಿವಿಡಿ

5 ಪ್ರಾರ್ಥನೆ : ಸೂಕ್ತಿಪ್ರಭ : ತುಳಸೀದಾಸರ ವಚನಗಳು
7 ಸಂಪಾದಕೀಯ: ಆಧುನಿಕತೆಯ ಆತಂಕಗಳು
28 ಶ್ರೀರಾಮಕೃಷ್ಣ ವಚನವೇದದಿಂದ: ಆತ್ಮಜಾಗೃತಿ
29 ತತ್ತ್ವ-ಜ್ಞಾನ — ಪುಷ್ಪಾ ಶೇಷಾದ್ರಿ
31 ಆಧ್ಯಾತ್ಮಿಕ ಸಂಭಾಷಣೆ : ಸ್ವಾಮಿ ಭೂತೇಶಾನಂದಜಿಯವರೊಂದಿಗೆ
33 ಅಧ್ಯಾಪಕರಿಗೊಂದು ಹಿತನುಡಿ — ಡಾ. ಎಲ್.ಸಿ.ಎಸ್.ಮೂರ್ತಿ
42 ಸುದ್ದಿ ಸಂಚಯ

10 ವಿಶೇಷ ಲೇಖನ
ಸ್ವಾಮಿ ವಿಜ್ಞಾನಾನಂದರ ಸ್ಮೃತಿಗಳು
ಸ್ವಾಮಿ ಅಪೂರ್ವಾನಂದ



16 ವಿಶೇಷ ಲೇಖನ
ಶ್ರೀ ತ್ಯಾಗರಾಜರ ಕೀರ್ತನೆಗಳಲ್ಲಿ ನವವಿಧ ಭಕ್ತಿ
ಭಾಗ-2
ಶಶಿಕಲಾ ಶ್ರೀಧರ್



25 ವಿಶೇಷ ಲೇಖನ
ದೀಪಾವಳಿ
ಡಾ. ಕೆ.ಎಲ್. ಪ್ರಸನ್ನಾಕ್ಷೀ





ಧಾರಾವಾಹಿ
20 ಸ್ವಾಮಿ ಅಖಂಡಾನಂದರ ಸ್ಮೃತಿಸಂಚಯ – ಭಾಗ 13
ಸ್ವಾಮಿ ನಿರಾಮಯಾನಂದ

35 ಯೋಗವಾಸಿಷ್ಠದ ಕಥೆಗಳು: ಕಥಾಗುಚ್ಛ 8
ಭೀಮ, ಭಾಸ ಮತ್ತು ದೃಢರ ಕಥೆ
ಸ್ವಾಮಿ ವೀರೇಶಾನಂದ

ರಾಮಚಂದ್ರ, ಮೊದಲ ಎರಡು ಉತ್ತಮ ಅಹಂಕಾರಗಳನ್ನು ಬೆಳೆಸಿಕೊಂಡರೆ, ಮೂರನೆಯ ಕೀಳು ಅಹಂಕಾರವನ್ನು ಸುಲಭವಾಗಿ ದಮನ ಮಾಡಬಹುದು....

38 ಚಿತ್ರಕಥೆ:
ತಾಯಾಗಿ ಬಂದಳು ರಾಕ್ಷಸಿ



## ಪ್ರಾರ್ಥನೆ

**ಯಸ್ಮಾತ್ಸರ್ವಮಿದಂ ಪ್ರಪಂಚರಚಿತಂ ಮಾಯಾಜಗಜ್ಜಾಯತೇ**
**ಯಸ್ಮಿಂಸ್ತಿಷ್ಠತಿ ಯಾತಿ ಚಾಂತಸಮಯೇ ಕಲ್ಪಾನುಕಲ್ಪೇ ಪುನಃ ॥**
**ಯಂ ಧ್ಯಾತ್ವಾ ಮುನಯಃ ಪ್ರಪಂಚರಹಿತಂ ವಿಂದಂತಿ ಮೋಕ್ಷಂ ಧ್ರುವಂ**
**ತಂ ವಂದೇ ಪುರುಷೋತ್ತಮಾಖ್ಯಮಮಲಂ ನಿತ್ಯಂ ವಿಭುಂ ನಿಶ್ಚಲಮ್ ॥**

ಯಾವ ಪರಮಾತ್ಮನಿಂದ ಈ ಸಮಸ್ತ ಪ್ರಪಂಚವೂ ಉತ್ಪತ್ತಿಯಾಗುವುದೋ, ನಮ್ಮ ದೃಷ್ಟಿಗೆ ಗೋಚರವಾಗುವ ಈ ಚರಾಚರಾತ್ಮಕವಾದ ಮಾಯಾಪ್ರಪಂಚವೆಲ್ಲವೂ ಯಾವ ಪರಮಾತ್ಮನಲ್ಲಿ ನೆಲೆಸಿರುವುದೋ, ಮತ್ತು ಪ್ರಳಯಕಾಲದಲ್ಲಿಯೂ ಪ್ರತಿಕಲ್ಪಗಳಲ್ಲಿಯೂ ಯಾರಲ್ಲಿ ಲೀನವಾಗುವುದೋ, ತಪಸ್ವಿಗಳು ಪ್ರಪಂಚದಿಂದ ಭಿನ್ನವಾದ ಯಾವ ಪರಮಾತ್ಮನನ್ನು ಧ್ಯಾನಮಾಡಿ ಶಾಶ್ವತ ಮೋಕ್ಷಪದವಿಯನ್ನು ಹೊಂದುವರೋ ಅಂತಹ ನಿರ್ಮಲನೂ, ಸನಾತನನೂ ಆದ್ಯಂತರಹಿತನೂ, ಸಕಲ ಜಗತ್ತಿಗೆ ಸ್ವಾಮಿಯೂ ಆದ ಪರಮಪುರುಷನನ್ನು ನಾನು ವಂದಿಸುತ್ತೇನೆ.

**ಯಂ ಧ್ಯಾಯಂತಿ ಬುಧಾಃ ಸಮಾಧಿಸಮಯೇ ಶುದ್ಧಂ ವಿಯತ್ಸನ್ನಿಭಮ್**
**ನಿತ್ಯಾನಂದಮಯಂ ಪ್ರಸನ್ನಮಮಲಂ ಸರ್ವೇಶ್ವರಂ ನಿರ್ಗುಣಮ್।**
**ವ್ಯಕ್ತಾವ್ಯಕ್ತಪರಂ ಪ್ರಪಂಚರಹಿತಂ ಧ್ಯಾನೈಕಗಮ್ಯಂ ವಿಭುಮ್**
**ತಂ ಸಂಸಾರವಿನಾಶಹೇತುಮಜರಂ ವಂದೇ ಹರಿಂ ಮುಕ್ತಿದಮ್॥**

ಶುದ್ಧನೂ, ಆಕಾಶದಂತೆ ಆಕಾರರಹಿತನೂ ಆದ ಆ ಪರಮೇಶ್ವರನನ್ನು ತಪಸ್ವಿಗಳು ಸಮಾಧಿಯೋಗದಲ್ಲಿ ಧ್ಯಾನಮಾಡುವರು. ಪ್ರಪಂಚಾತೀತನಾಗಿ ಅವ್ಯಕ್ತಸ್ವರೂಪದಿಂದಿರುವ ಆ ಬ್ರಹ್ಮವಸ್ತುವನ್ನು ಧ್ಯಾನದಿಂದ ಮಾತ್ರವೇ ತಿಳಿಯಲು ಸಾಧ್ಯ. ಆ ಪರಮ ಪುರುಷನು ಯಾವಾಗಲೂ ಆನಂದಸ್ವರೂಪನು, ದೋಷರಹಿತನು, ಸದಾ ಪ್ರಸನ್ನನು. ಅವನಿಗೆ ವೃದ್ಧಿಕ್ಷಯಗಳಾಗಲಿ, ನಾಶವಾಗಲಿ ಇಲ್ಲ. ಸಂಸಾರಬಂಧನದ ನಾಶಕ್ಕೆ ಕಾರಣನಾದ, ಮುಕ್ತಿಯನ್ನು ನೀಡಬಲ್ಲ ಅಂತಹ ಹರಿಯನ್ನು ನಾನು ವಂದಿಸುತ್ತೇನೆ.

– ಬ್ರಹ್ಮಪುರಾಣ

## ಸೂಕ್ತಿಪ್ರಭ

## ತುಳಸೀದಾಸರ ವಚನಗಳು



* 'ಆಸೆ'ಯೆಂಬ ದೇವತೆ ನಿಜವಾಗಿಯೂ ಆಶ್ಚರ್ಯಕರವಾದವಳು. ಅವಳನ್ನು ಪೂಜಿಸಿದರೆ ಆಕೆ ದುಃಖವನ್ನೇ ನೀಡುವಳು. ಅವಳನ್ನು ಕಡೆಗಣಿಸಿದರೆ ಆನಂದವನ್ನು ನೀಡುವಳು.

* ವಿವೇಕವನ್ನು ಕೊಡಲಾಗದು, ಪಡೆಯಲಾಗದು – ಅದು ಅತ್ಯಂತ ಕಷ್ಟ. ಹೇಗೋ ಅದೃಷ್ಟದಿಂದ ಅದನ್ನು ಪಡೆದರೂ, ಅದನ್ನು ಹಿಡಿದಿಟ್ಟುಕೊಳ್ಳುವುದಕ್ಕೆ ನಾನಾ ಅಡ್ಡಿ, ಆತಂಕಗಳು ಬರುತ್ತವೆ.

* ಕೆಟ್ಟ ಘಳಿಗೆಯಲ್ಲಿ ತಾಳ್ಮೆ, ಧರ್ಮ, ವಿವೇಕ, ಒಳ್ಳೆಯ ಸಾಹಿತ್ಯ, ಧೈರ್ಯ, ಸತ್ಯನಿಷ್ಠೆ, ಭಗವಂತನ ಆಶ್ರಯ – ಇವೇ ನಿಜವಾದ ಸ್ನೇಹಿತರಾಗಿರುತ್ತವೆ.

* ಯಾರನ್ನೂ ಕಠಿಣ ಮಾತುಗಳಿಂದ ನಿಂದಿಸಬೇಡ. ಬದಲಾಗಿ, ಅವರಿಗೆ ದಪ್ಪನೆಯ ರೊಟ್ಟಿ ನೀಡು. (ಅವರಿಗೆ ಸೇವೆ ಮಾಡಿ ಅವರನ್ನು ಗೆಲ್ಲು.) ಸಾವಿರ ಸೋಲುಗಳನ್ನು ಜಯವೆಂದೇ ಎಣಿಸು; ಕಠಿಣವಾಕ್ಯಗಳಿಂದ ಲಭಿಸುವ ಜಯವನ್ನು ಸೋಲೆಂದೇ ಭಾವಿಸು.

* ಅನುಕಂಪದ ನುಡಿಗಳು ದ್ವೇಷವನ್ನು ಕತ್ತರಿಸುವುವು. ಇತರರಿಗೆ ಒಳಿತನ್ನು ಮಾಡುವುದೇ ಪ್ರೀತಿಗೆ ಮೂಲ. ದೈನ್ಯದಿಂದ ಕೂಡಿದ ಪ್ರಾರ್ಥನೆಯಿಂದಲೇ ಎಲ್ಲ ಶುಭವೂ ಬಂದೊದಗುವುದು.

* ಮಳೆ ಬಂದಾಗ ಜನ ಸಂತೋಷ ಪಡುತ್ತಾರೆ. ಆದರೆ ಸೂರ್ಯನೇ ಆ ನೀರನ್ನು ಸೆಳೆದು ಮಳೆಗೆ ಕಾರಣವಾಗುತ್ತಾನೆ ಎಂಬುದು ಅವರಿಗೆ ತಿಳಿಯದು. ತುಳಸಿ ಹೇಳುತ್ತಾನೆ, ಸೂರ್ಯನಂಥ ರಾಜ ಎಲ್ಲಿ ಕಾಣಿಸಿಕೊಳ್ಳುವನೋ, ಅಲ್ಲಿನ ಪ್ರಜೆಗಳೇ ಅದೃಷ್ಟಶಾಲಿಗಳು.

* ಗುರುವಿಲ್ಲದೆ ಜ್ಞಾನವುಂಟೆ? ವೈರಾಗ್ಯವಿಲ್ಲದೆ ಜ್ಞಾನ ಲಭಿಸುವುದೆ? ದೇವರ ಮೇಲೆ ಭಕ್ತಿಯಿಲ್ಲದೆ ದಿವ್ಯಾನಂದ ಲಭಿಸುವುದೆ? ಲಭಿಸದು ಎಂದೇ ವೇದ-ಪುರಾಣಗಳು ಹೇಳುತ್ತವೆ.



ಏಳು, ಮೇಲೇಳೇಳು ಸಾಧುವೆ, ಹಾಡು ಚಾಗಿಯ ಹಾಡನು;
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು!
ದೂರದಡವಿಯೊಳೆಲ್ಲಿ ಲೌಕಿಕ ವಿಷಯವಾಸನೆ ಮುಟ್ಟದೊ,
ಎಲ್ಲಿ ಗಿರಿಗುಹೆ ಕಂದರದ ಬಳಿ ಜಗದ ಗಲಿಬಿಲಿ ತಟ್ಟದೊ,
　　ಎಲ್ಲಿ ಕಾಮವಿ ಸುಳಿಯದೊ, – ಮೇಣ್
　　ಎಲ್ಲಿ ಜೀವವು ತಿಳಿಯದೊ
ಕೀರ್ತಿ ಕಾಂಚನವೆಂಬುವಾಸೆಗಳಿಂದ ಜನಿಸುವ ಭ್ರಾಂತಿಯ,
ಎಲ್ಲಿ ಆತ್ಮವು ಪಡೆದು ನಲಿವುದೊ ನಿಚ್ಚವಾಗಿಹ ಶಾಂತಿಯ,
ನನ್ನಿಯರಿವಾನಂದವಾಹಿನಿಯೆಲ್ಲಿ ಸಂತತ ಹರಿವುದೊ,
ಎಲ್ಲಿ ಎಡೆಬಿಡದಿರದ ತೃಪ್ತಿಯ ಝರಿ ನಿರಂತರ ಸುರಿವುದೊ,
ಅಲ್ಲಿ ಮೂಡಿದ ಹಾಡನುಲಿಯೈ, ವೀರ ಸಂನ್ಯಾಸಿ –

ಓಂ! ತತ್! ಸತ್! ಓಂ!

*–ಸ್ವಾಮಿ ವಿವೇಕಾನಂದ*



# ವಿವೇಕಪ್ರಭ

## ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ



**ಶ್ರೀರಾಮಕೃಷ್ಣ ಆಶ್ರಮ, ವಿವೇಕಪ್ರಭ ಕಾರ್ಯಾಲಯ, ಯಾದವಗಿರಿ, ಮೈಸೂರು 570 020**

**ಚಂದಾ ಅರ್ಜಿ**

ಮಾನ್ಯರೇ, (ನಿಮಗೆ ಸಂಬಂಧಿಸಿದ್ದನ್ನು ✓ ಮಾಡಿ)

☐ ನನ್ನನ್ನು / ಈ ಕೆಳಕಂಡ ಹೆಸರಿನವರನ್ನು 'ವಿವೇಕಪ್ರಭ' ಪತ್ರಿಕೆಯ ಚಂದಾದಾರರನ್ನಾಗಿ/ ಪೋಷಕರನ್ನಾಗಿ ಮಾಡಬೇಕಾಗಿ ವಿನಂತಿ

☐ ನನ್ನ/ ಕೆಳಕಂಡ ಹೆಸರಿನವರ ಚಂದಾವನ್ನು ನವೀಕರಿಸಬೇಕಾಗಿ ವಿನಂತಿ. ಈಗಿನ ಚಂದಾಸಂಖ್ಯೆ.........................

**ನನ್ನ ವಿಳಾಸ**

ನನ್ನ ಹೆಸರು.......................................................................

ವಿಳಾಸ.............................................................................

.....................................................................................

...................................................ಪಿನ್.............................

ಚಂದಾ ವಿವರ: (ನಿಮಗೆ ಸಂಬಂಧಿಸಿದ್ದನ್ನು ✓ ಮಾಡಿ)

| 1 ವರ್ಷದ ಚಂದಾ | 3 ವರ್ಷದ ಚಂದಾ | ಆಜೀವ ಚಂದಾ | ಪೋಷಕರ ಸಹಾಯಧನ |
|---|---|---|---|
| ₹ 140 | ₹ 375 | ₹ 3000 | ₹ 5000 |

**ಪತ್ರಿಕೆ ಪಡೆಯುವವರ ವಿಳಾಸ**

ಹೆಸರು.............................................................................

ವಿಳಾಸ.............................................................................

.....................................................................................

...................................................ಪಿನ್.............................

ಹಣವನ್ನು ಮನಿ ಆರ್ಡರ್ / ಡ್ರಾಫ್ಟ್ (ಶ್ರೀರಾಮಕೃಷ್ಣ ಆಶ್ರಮ, ವಿವೇಕಪ್ರಭ A/c ಹೆಸರಿನಲ್ಲಿ) ಮೂಲಕ ಕಳುಹಿಸುತ್ತಿದ್ದೇನೆ.

ವಿವರ...........................................................................

1. ಹೊರ ಊರಿನ ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
2. ವಿದೇಶಗಳಿಗೆ ಅನ್ವಯವಾಗುವ ಚಂದಾ ವಿವರಗಳಿಗೆ ಹಾಗೂ ಇತರ ವಿವರಗಳಿಗಾಗಿ ನಮಗೆ ಬರೆಯಿರಿ.

ಸಹಿ



"ಮನಸ್ಸಿನಿಂದಲೇ ಬಂಧನ, ಮನಸ್ಸಿನಿಂದಲೇ ಮುಕ್ತಿ. 'ನಾನು ಮುಕ್ತಪುರುಷ. ಸಂಸಾರದಲ್ಲಿ ಇದ್ದರೆ ತಾನೆ ಏನು, ಅರಣ್ಯದಲ್ಲಿ ಇದ್ದರೆ ತಾನೆ ಏನು, ನನಗೆಲ್ಲಿಯದು ಬಂಧನ? ನಾನು ಭಗವಂತನ ಮಗು; ರಾಜಾಧಿರಾಜನ ಮಗು. ನನಗಾವುದರ ಬಂಧನ?' ಎಂಬುದಾಗಿ ಯಾರು ಸತತ ಚಿಂತಿಸುತ್ತಾನೊ, ಆತ ಮುಕ್ತನಾಗಿಬಿಡುತ್ತಾನೆ."

– ಶ್ರೀರಾಮಕೃಷ್ಣ ಪರಮಹಂಸ



"ಮಗು, ಮನುಷ್ಯಜನ್ಮ ಹೊಂದಲು ನೀನು ತುಂಬಾ ಅದೃಷ್ಟಶಾಲಿಯಾಗಿದ್ದಿರಬೇಕು. ಭಗವಂತನ ಮೇಲೆ ಗಾಢ ಭಕ್ತಿಯನ್ನು ಹೊಂದಿರು. ಅತ್ಯಂತ ಕಠಿಣ ಶ್ರಮ ಪಡಬೇಕು. ಪ್ರಯತ್ನವಿಲ್ಲದೆ ಏನನ್ನಾದರೂ ಸಾಧಿಸುವುದು ಹೇಗೆ? ದಿನನಿತ್ಯದ ಕೆಲಸಗಳಲ್ಲಿ ಮುಳುಗಿರುವಾಗಲೂ ನೀನು ಪ್ರಾರ್ಥನೆಗಾಗಿ ಸ್ವಲ್ಪ ಸಮಯವನ್ನು ಮೀಸಲಿಡಬೇಕು."

–ಶ್ರೀಮಾತೆ ಶಾರದಾದೇವಿ



"ಶುದ್ಧಾತ್ಮರು ನೀವು. ಏಳಿ, ಜಾಗೃತರಾಗಿ. ಹೇ ಸರ್ವಶಕ್ತರೆ, ನಿದ್ರೆ ನಿಮಗೆ ತರವಲ್ಲ. ದುಃಖಿಗಳೆಂದೂ, ದುರ್ಬಲರೆಂದೂ, ಅಧಮರೆಂದೂ ನೀವು ಆಲೋಚಿಸದಿರಿ. ಎದ್ದೇಳಿ, ಜಾಗೃತರಾಗಿ. ನಿಮ್ಮ ನೈಜಸ್ವರೂಪವನ್ನು ಪ್ರಕಟಪಡಿಸಿ. ನೀವು ಪಾಪಿಗಳೆಂದು ಆಲೋಚಿಸುವುದು ನಿಮಗೆ ತರವಲ್ಲ. ಇವನ್ನು ನಿಮ್ಮ ಮನಸ್ಸಿಗೆ ಹೇಳಿಕೊಳ್ಳಿ. ಪ್ರಪಂಚಕ್ಕೆ ಸಾರಿ. ಇದರಿಂದ ಎಂತಹ ಒಂದು ಕ್ರಿಯಾತ್ಮಕ ಪರಿಣಾಮವುಂಟಾಗುತ್ತದೆ, ವಿದ್ಯುತ್‌ಮಿಂಚಿನಂತೆ ಹೇಗೆ ಎಲ್ಲವೂ ಪ್ರಕಾಶಗೊಳ್ಳುವುದೆಂಬುದನ್ನು ನೋಡಿ. ಇದನ್ನು ಮಾನವ ಜನಾಂಗಕ್ಕೆ ಸಾರಿ. ಅವರ ಶಕ್ತಿಯನ್ನು ಅವರಿಗೆ ತೋರಿ."

–ಸ್ವಾಮಿ ವಿವೇಕಾನಂದ

**ದೀಪಾವಳಿ ಹಬ್ಬದ ಹಾರ್ದಿಕ ಶುಭಾಶಯಗಳು**

# ಆಧುನಿಕತೆಯ ಆತಂಕಗಳು

'ಉತ್ತಮ ಜೀವನಕ್ಕೆ, ಭವಿಷ್ಯದ ಬದುಕಿನ ಯಶಸ್ಸಿಗೆ ಯಾವುದು ಸರಿಯಾದ ಮಾರ್ಗ?' ಎಂದು ಪ್ರಶ್ನಿಸಿದರೆ, ನೇರ ಹಾಗೂ ಸರಳ ಉತ್ತರ ಸಿಗುವುದಕ್ಕೆ ಬದಲಾಗಿ, ಅಸ್ಪಷ್ಟವಾದ, ಗೋಜಲುಗೋಜಲಾದ, ಅಪೂರ್ಣ ಮಾಹಿತಿಯ ಉತ್ತರಗಳು ಸಿಗುತ್ತವೆ. ಬೆಳೆಯುವ ಮಕ್ಕಳಾಗಲಿ, ಹದಿಹರೆಯದವರಾಗಲಿ ಕಂಡುಕೊಳ್ಳುವ ಮಾರ್ಗ ಒಂದೊಂದು ಬಗೆಯದು. ಹೆತ್ತವರ ಆಸೆ, ಆಕಾಂಕ್ಷೆಗಳು ನಾನಾ ಬಗೆಯವು. ಸಮಾಜದ ಹಿತಚಿಂತಕರೆಂದು ಭಾವಿಸುವ ಹಿರಿಯ ಜೀವಿಗಳಲ್ಲೂ ಒಮ್ಮತವಿಲ್ಲ. ಇನ್ನು ಅನೇಕ ಧ್ಯೇಯ, ಆದರ್ಶಗಳನ್ನು ರೂಪಿಸಿದ ಮಹಾಪುರುಷರ ವಿಭಿನ್ನ ಅಭಿಪ್ರಾಯಗಳಲ್ಲಿ ತಾಳಮೇಳವಿಲ್ಲ. ಮುಂದಿನ ಜನಾಂಗವನ್ನು ಕಟ್ಟುವ ಸಮಾಜಕ್ಕೆ ಇದರಿಂದ ಹಾನಿಯಾಗದೆ? 'ಬೆಳೆವ ಸಿರಿ'ಯಾಗಿರುವ ಮೊಳಕೆ ಹಲವು ಒತ್ತಡಗಳಿಂದ ಮುರುಟಿ ಹೋಗಲಾರದೆ? ಭ್ರಷ್ಟಾಚಾರ, ಸಿನಿಕತನ, ಸಮಾಜವಿರೋಧಿ ಚಟುವಟಿಕೆಗಳ ಅಗೋಚರ ಪ್ರಭಾವವು ಸಮಾಜದ ಧ್ಯೇಯಾದರ್ಶಗಳನ್ನು ರೂಪಿಸುವಂತಾದರೆ, ಭವಿಷ್ಯ ಭಾರತದ ಚಿತ್ರ ಕರಾಳವಲ್ಲವೆ?

– ಹೀಗೆ ಹತ್ತು ಹಲವು ಚರ್ಚೆ, ವಿಶ್ಲೇಷಣೆ ನಮ್ಮ ಸುತ್ತ ನಡೆಯುತ್ತಿವೆ. ಸುರಕ್ಷಿತ ಸಮಾಜ ನಿರ್ಮಾಣದ ಬಗ್ಗೆ ಮಾತನಾಡುತ್ತಿರುವಂತೆಯೆ ಆಘಾತಕಾರಿ ಸುದ್ದಿಯೊಂದು ಬರುತ್ತದೆ, ಎಲ್ಲೋ ದೂರ ನಡೆಯಿತೆಂದು ಕೇಳಿದ ಅನಾಹುತ ನಮ್ಮ ಮನೆಯಲ್ಲೇ ನಡೆದುಹೋಗಿರುತ್ತದೆ! ಇದಕ್ಕೆ ಯಾರು ಹೊಣೆ? ಹೆತ್ತವರೆ? ಪಾಲಕರೆ? ವಿದ್ಯಾಸಂಸ್ಥೆಗಳೆ? ಸರಕಾರವೆ? ಅಥವಾ ಇಡೀ ಸಮಾಜವೆ? ದುಃಖ, ದೌರ್ಜನ್ಯ, ಅನಾಚಾರಗಳು ನಡೆದಾಗಲೆಲ್ಲ ಅದಕ್ಕೆ ಬಲಿಯಾಗುವವರು ಎಳೆಯ ಮುಗ್ಧರು ಹಾಗೂ ಯುವ ಜನತೆ ನಿಜ; ಆದರೆ ಅದರ ಪರಿಣಾಮ ಇಡೀ ಕುಟುಂಬದ ಮೇಲೆ, ಸಮಾಜದ ಮೇಲೆ ನಡೆಯುತ್ತದೆ. ಸಮಾಜ ಯಾವುದೇ ಅಹಿತಕರ ಘಟನೆಯನ್ನು ನಿರೀಕ್ಷಿಸುವುದಿಲ್ಲ, ಅದು ನಡೆದಾಗಲೂ ಸಹಿಸುವುದಿಲ್ಲ. ಹಾಗಿದ್ದರೆ ಅಂಥ ಘಟನೆಗಳಿಗೆ ಪ್ರೇರಣೆ ಎಲ್ಲಿಂದ ಬಂತು? ಅದರ ಮೂಲವನ್ನರಸಿ ಅದನ್ನು ನಿಗ್ರಹಿಸುವಲ್ಲಿ ಸಮಾಜ ಸೋತಿದ್ದು ಹೇಗೆ? – ಹೀಗೆ ಕಾಡುವ ಪ್ರಶ್ನೆಗಳಿಗೆ ಕೊನೆಯಿಲ್ಲ; ಸಮಸ್ಯೆಗಳೂ ಪರಿಹಾರವಾಗುವುದಿಲ್ಲ.

ಮನುಷ್ಯ ಬಯಸುವುದು ಸುಖವನ್ನು, ಆನಂದವನ್ನು – ಇದು ಅನಾದಿಕಾಲದಲ್ಲಿ ಎಷ್ಟು ನಿಜವೋ ಇಂದಿಗೂ ನಿಜ. ಆದರೆ ನಿಜವಾದ ಸುಖ, ಆನಂದ ಎಲ್ಲಿದೆ ಎಂದು ಅರ್ಥವಾಗದೆ ಹೋದಾಗಲೇ ಎಲ್ಲ ಗೊಂದಲವುಂಟಾಗುವುದು. ಮೃಗದಂತೆ ಇಂದ್ರಿಯಸುಖದ ಬೆನ್ನತ್ತಿ ಹೊರಟರೆ ಮಾನವನ ಜೀವನ ಮೃಗೀಯವಾಗುತ್ತದೆ; ಸಮಾಜ ರೂಪಿಸಿಕೊಂಡಿರುವ ಕೆಲವು ಮೌಲ್ಯ, ನಿಯಮ ಹಾಗೂ ಸಂಸ್ಕೃತಿ ಇವು ಕಲಿಸುವ ಸತ್ಯವನ್ನು ಅರಿತುಕೊಂಡು, ಮುನ್ನಡೆದರೆ ಅವನ ಬದುಕು 'ಮಾನವೀಯ'ವಾಗುತ್ತದೆ. ಕುಟುಂಬ, ಸಮಾಜ ಹಾಗೂ ಶೈಕ್ಷಣಿಕ ವಲಯಗಳು ಇಂಥ ಜೀವನದ ಪಾಠಗಳನ್ನು ಕಲಿಸಬೇಕು. ಇನ್ನೂ ಹೊಸ ಹೆಜ್ಜೆಯನ್ನು ಅರಸಿ ಭವಿಷ್ಯದ ಸುಂದರ ಬದುಕನ್ನು ಕಲ್ಪಿಸಿಕೊಳ್ಳಬೇಕಾದ ಎಳೆಯರಿಗೆ ಹಿರಿಯ ತಲೆಮಾರಿನ ಮಾರ್ಗದರ್ಶನ, ಸಂರಕ್ಷಣೆ ಹಾಗೂ ಪ್ರೋತ್ಸಾಹ ಇಲ್ಲದೆ ಹೋದರೆ, ಅವರ ಬದುಕು ಅಸ್ತವ್ಯಸ್ತವಾಗದೆ?

## ನಮ್ಮ ಸಾಮಾಜಿಕ ವ್ಯವಸ್ಥೆ

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಬದುಕಿನ ಪಾಠಗಳನ್ನು ಕಲಿಸುವ ಕಾರ್ಯ ಹಲವು ದಿಕ್ಕುಗಳಿಂದ ನಡೆಯುತ್ತ ಬಂದಿದೆ. ಕೌಟುಂಬಿಕ ರಚನೆ ಈ ದೃಷ್ಟಿಯಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. 'ಸುಳ್ಳು ಹೇಳಬಾರದು, ಸತ್ಯವನ್ನೇ ನುಡಿ' ಎಂದು ಬಾಲ್ಯದಿಂದಲೇ ತಾಯಿ, ತಂದೆ, ಇನ್ನಿತರ ಹಿರಿಯರು ಹೇಳಿಕೊಡುತ್ತಾರೆ. ಅಂತೆಯೇ, ಹೇಗೆ ನಡೆದುಕೊಳ್ಳಬೇಕು, ಯಾವುದು ಸರಿಯಾದ ಜೀವನಕ್ರಮ, ಏನು ಮಾಡಿದರೆ ಒಳಿತಾಗುವುದು – ಇವೆಲ್ಲವನ್ನೂ ಎಳೆಯರಿಗೆ ಕಲಿಸಿಕೊಡುವುದು ತನ್ನ ಕುಟುಂಬ ಹಾಗೂ ತಾನಿರುವ ಸಮಾಜ. ಇದರೊಂದಿಗೆ ವಿದ್ಯಾಭ್ಯಾಸ, ಅಧ್ಯಾಪಕರು, ಬೆಳೆಯುತ್ತ ತಮಗೆ ಆಗುವ ಅನುಭವಗಳು ಇನ್ನಷ್ಟು ಸಂಗತಿಗಳನ್ನು ಕಲಿಸುತ್ತವೆ. ಹೊರಗಿನಿಂದ ಕಲಿತ ವಿಚಾರಗಳೊಂದಿಗೆ ತನ್ನ ಸ್ವತಂತ್ರ ಆಲೋಚನೆಯೂ ಸೇರಿಕೊಂಡು, ಒಬ್ಬ ವ್ಯಕ್ತಿ ತನ್ನದೇ ದಾರಿ ಕಂಡುಕೊಳ್ಳುತ್ತಾನೆ. ಪ್ರಬುದ್ಧನಾದವನು ಮತ್ತೆ ತನ್ನ ಎಳೆಯರಿಗೆ ದಾರಿ ತೋರಿಸಲು ಸಿದ್ಧನಾಗುತ್ತಾನೆ. ಹೀಗೆ ಸಾಗುವ ಸಾಮಾಜಿಕ ವ್ಯವಸ್ಥೆಯಲ್ಲಿ ಎಲ್ಲವೂ ಸುಸೂತ್ರವಾಗಿರುತ್ತದೆ, ಎಲ್ಲೆಲ್ಲೂ ಶಾಂತಿ, ಸಮಾಧಾನಗಳೇ ಇರುತ್ತವೆ ಎಂದು ಹೇಳಲಾಗುವುದಿಲ್ಲ. ಪ್ರತಿಯೊಂದು ಸಮಾಜದಲ್ಲೂ ಸಂಘರ್ಷ, ಬಿಕ್ಕಟ್ಟು, ಹೋರಾಟ, ಸಮನ್ವಯ ಇವೆಲ್ಲ ನಡೆದೇ ನಡೆಯುತ್ತವೆ. ಆದರೆ ಸಮಾಜದ ಮೂಲವ್ಯವಸ್ಥೆ ನಾಶವಾಗ

ಬಾರದು ಅಷ್ಟೆ. ನಮ್ಮಲ್ಲಿ ವರ್ಣವ್ಯವಸ್ಥೆ, ಜಾತಿವ್ಯವಸ್ಥೆ, ಧಾರ್ಮಿಕ ಕಟ್ಟುಪಾಡುಗಳು ಅನೇಕ ಒಳಿತನ್ನು ನೀಡುವ ಉದ್ದೇಶದಿಂದ ಜಾರಿಗೆ ಬಂದರೂ, ಕಾಲಾಂತರದಲ್ಲಿ ಅವು ಸಮಾಜದ ಏಕತೆಗೆ ಹಾಗೂ ಆರೋಗ್ಯಕರ ಬೆಳವಣಿಗೆಗೆ ಹಾನಿಯನ್ನುಂಟುಮಾಡಿದ ಸಂಗತಿ ಎಲ್ಲರಿಗೂ ತಿಳಿದೇ ಇದೆ. ಆದರೆ ನಮ್ಮ ನೈತಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಮೌಲ್ಯಗಳಲ್ಲಿ ಜೀವನವನ್ನು ಶ್ರೇಯಸ್ಸಿನತ್ತ ಕರೆದೊಯ್ಯುವ ಅನೇಕ ಉತ್ತಮ ಅಂಶಗಳಿವೆ – ಅವುಗಳನ್ನು ನಾವು ಕಳೆದುಕೊಳ್ಳಬಾರದು; ಇಂದು ನಗರೀಕರಣವು ಶರವೇಗ ದಿಂದ ನಮ್ಮ ಸಮಾಜದ ಮೂಲರಚನೆಯನ್ನೇ ಛಿದ್ರಗೊಳಿಸುತ್ತಿದೆ; ಕೇವಲ ಗ್ರಾಮಗಳಲ್ಲಿ ಮಾತ್ರ ಭಾರತೀಯ ಸಮಾಜ, ಮೌಲ್ಯ, ಸಂಸ್ಕೃತಿಗಳು ಉಳಿಯುವಂತಾಗಿದೆ. ಕ್ರಮೇಣ ಗ್ರಾಮಗಳೂ ನಗರದ ಪ್ರಭಾವಕ್ಕೊಳಗಾಗಿ, ತನ್ನತನವನ್ನು ಕಳೆದುಕೊಳ್ಳುತ್ತಿವೆ; ಇದೇ ಆತಂಕಕ್ಕೆ ಕಾರಣವಾದ ಅಂಶವಾಗಿದೆ.

### ಹೊಸ ಅವಿಷ್ಕಾರಗಳು

ವೈಜ್ಞಾನಿಕ, ತಾಂತ್ರಿಕ ಜಗತ್ತು ವಿಸ್ತಾರಗೊಂಡಂತೆಲ್ಲ ಸಾಮಾಜಿಕ ಸ್ಥಿತಿಗಳು ಬದಲಾಗುತ್ತವೆ. ರೇಡಿಯೋ, ಟೆಲಿವಿಷನ್, ವಾಹನ ಸೌಕರ್ಯ ಇತ್ಯಾದಿಗಳು ನಮ್ಮ ಜೀವನವನ್ನು ಪ್ರವೇಶಿಸಿ ಶತಮಾನಗಳೇ ಕಳೆದಿವೆ. ಅವುಗಳನ್ನೆಲ್ಲ ಸಮಾಜ ಕುತೂಹಲದಿಂದ ಸ್ವಾಗತಿಸಿದೆ, ತಮ್ಮದನ್ನಾಗಿಸಿ ಮಾಡಿಕೊಂಡಿದೆ. ಕಾರಣ, ಅವು ಸಮಾಜಕ್ಕೆ ಆಘಾತಕಾರಿಯೆನಿಸಲಿಲ್ಲ, ಬದಲಾಗಿ ಅನುಕೂಲಕರ ವೆನಿಸಿವೆ. ಆದರೆ ಈಚೆಗೆ ಟಿ.ವಿ, ಇಂಟರ್‌ನೆಟ್, ಮೊಬೈಲ್ ಮೊದಲಾದವುಗಳ ಮಿತಿಮೀರಿದ ಬೆಳವಣಿಗೆ, ಸಮಾಜದ ಮೇಲೆ ಅವು ಬೀರುತ್ತಿರುವ ಪ್ರಭಾವ ಹಲವಾರು ಬಗೆಯ ಚರ್ಚೆಗಳಿಗೆ ಕಾರಣವಾಗಿದೆ.

ಈ ಸಲವತ್ತುಗಳು ಬೇಕೇ ಬೇಡವೇ ಎಂದು ಈಗ ಯಾರೂ ಚರ್ಚಿಸುತ್ತಿಲ್ಲ; ಚರ್ಚೆಯಾಗುವ ಮೊದಲೇ ಅವು ಅನಿವಾರ್ಯ ವಾಗಿಬಿಟ್ಟಿವೆ. ಆದರೆ ಅವುಗಳಿಂದಾಗುತ್ತಿರುವ ಆಘಾತಕಾರಿ ಬೆಳ ವಣಿಗೆಗಳು ಭಾರತೀಯ ಸಮಾಜವನ್ನು ಆತಂಕಕ್ಕೀಡುಮಾಡಿದೆ. ನಮ್ಮ ಸಮಾಜ, ಸಂಸ್ಕೃತಿ, ಮೌಲ್ಯಗಳನ್ನು ಕುರಿತು ಕಾಳಜಿ ಹೊಂದಿರುವವರೆಲ್ಲ ಸಮೂಹ ಮಾಧ್ಯಮಗಳ ಈ ಪ್ರಭಾವವನ್ನು 'ಸಾಂಸ್ಕೃತಿಕ ದಾಳಿ'ಯೆಂದೇ ಗುರುತಿಸುತ್ತಾರೆ. ಈ ಹೊಸ ಆವಿ ಷ್ಕಾರಗಳು ಎಷ್ಟರಮಟ್ಟಿಗೆ ಬೇಕು, ಎಲ್ಲಿ ಹಾಗೂ ಹೇಗೆ ಅವನ್ನು ಬಳಸಬೇಕು, ಹೇಗೆ ಬಳಸಿದರೆ ಅವುಗಳಿಂದಾಗುವ ಹಾನಿಯನ್ನು ತಡೆಗಟ್ಟಬಹುದು – ಈ ಕುರಿತು ಕೇವಲ ಚರ್ಚೆ ನಡೆದರೆ ಸಾಲದು. ಎಳವೆಯಿಂದಲೇ ಮಕ್ಕಳನ್ನು ಈ ದಿಕ್ಕಿನಲ್ಲಿ ತರಬೇತಿ ನೀಡಿ, ನೂತನ ಆವಿಷ್ಕಾರಗಳ ಸದ್ಬಳಕೆಯಾಗುವಂತೆ ಮಾಡಬೇಕು. ಈ ವಿಷಯದಲ್ಲಿ ಪಾಲಕರ ಮತ್ತು ಶಿಕ್ಷಕರ ಹೊಣೆಗಾರಿಕೆ ಬಹಳ ಮುಖ್ಯ. ಕಾಲ ಮೀರುವ ಮೊದಲೇ ಸೂಕ್ತ ಶೈಕ್ಷಣಿಕ ನೀತಿ-ನಿಯಮ, ಸಾಮಾಜಿಕ ನೀತಿ ಸಂಹಿತೆಗಳನ್ನು ರಚಿಸಿ, ಭಾರತೀಯ ಜೀವನ ಶೈಲಿಯನ್ನು ಸಂರಕ್ಷಿಸುವ ಜವಾಬ್ದಾರಿ ಸರಕಾರದ್ದಾಗಿದೆ .

### ಪಾಲಕರ ಪಾತ್ರ

ಈ ಎಲ್ಲ ಬೆಳವಣಿಗೆಗಳ ನಡುವೆ ಹಲವು ಮಂದಿ ಪಾಲಕರು ತಮ್ಮ ಮಕ್ಕಳ ಮೇಲೆ ನಿಯಂತ್ರಣ ಕಳೆದುಕೊಂಡು, 'ನಮ್ಮ ಹುಡುಗ ಎಷ್ಟು ಚೆನ್ನಾಗಿದ್ದ! ಈಚೆಗೆ ಅವನು ಏನೋ ಒಂದು ರೀತಿ ಆಗಿಬಿಟ್ಟಿದ್ದಾನೆ. ಓದುವುದಕ್ಕೆ ಮನಸ್ಸಿಲ್ಲ, ಯಾವಾಗ ನೋಡಿದರೂ ಜೋಲು ಮುಖ ಹಾಕಿಕೊಂಡಿರುತ್ತಾನೆ. ಮೊಬೈಲ್, ಟಿ.ವಿ. ಬಿಟ್ಟರೆ ಬೇರೆ ಏನೂ ಇಲ್ಲ. ಹೀಗಾದರೆ ಹೇಗೆ?' ಎಂದು ಎಲ್ಲೆಂದ ರಲ್ಲಿ ತಮ್ಮ ದುಃಖವನ್ನು ತೋಡಿಕೊಳ್ಳುತ್ತಾರೆ. ಇನ್ನೂ ಮಗು ಮಾತು ಕಲಿತಿಲ್ಲ, ಅಷ್ಟರಲ್ಲೇ ಅದು ಟಿ.ವಿ. ಮುಂದೆ ಕುಳಿತು, ಅದರ ಮಾಯಾಜಗತ್ತಿನ ಗೀಳನ್ನು ಅಂಟಿಸಿಕೊಳ್ಳುತ್ತದೆ. ಶಾಲೆ ಯಲ್ಲಿ ಕಲಿಯುವ ವಿಷಯಗಳಿಗಿಂತ ಹೆಚ್ಚಾಗಿ, ಟಿ.ವಿ., ಕಂಪ್ಯೂಟರ್, ಮೊಬೈಲ್‌ಗಳಿಂದ ಕಲಿಯುತ್ತದೆ. ಎಳೆಯ ವಯಸ್ಸಿನಲ್ಲಿ ಮನಸ್ಸು ಏಕಾಗ್ರತೆಯನ್ನು ಅಭ್ಯಾಸವನ್ನು ರೂಡಿಸಿಕೊಳ್ಳಬೇಕು; ಆದರೆ ಇಲ್ಲಿ ಚಾಂಚಲ್ಯವೆ ಅದರ ಸಹಜ ಗುಣವೂ ರೂಢಿಸಿಕೊಳ್ಳುವ ಗುಣವೂ ಆಗಿಬಿಡುತ್ತದೆ. ಇದಕ್ಕೆ ಮಕ್ಕಳನ್ನು ದೂರುವ ಬದಲು, ಅಂಥ ಪರಿಸರವುಂಟಾಗದಂತೆ ಪಾಲಕರು ಕಾಳಜಿ ವಹಿಸಬೇಕು. ಮಗುವಿನ ವಿದ್ಯಾಭ್ಯಾಸ, ಬೆಳವಣಿಗೆ ಕೆಡುತ್ತದೆ ಎನ್ನುವ ಕಾರಣ ಕ್ಕಾಗಿ ಟಿ.ವಿ. ಮೊಬೈಲ್ ಬಳಕೆಯನ್ನೇ ನಿಲ್ಲಿಸಿದ ಹೆತ್ತವರಿದ್ದಾರೆ. ಆದರೆ ಅದರಿಂದ ಮಗು ಅವುಗಳ ಬಳಕೆ ಮಾಡದಂತೆ ತಡೆಯ ಲಾಗದು; ಹೆತ್ತವರಿಗೆ ತಿಳಿಯದಂತೆ ಮಾಡುತ್ತವೆ ಅಷ್ಟೆ. ನಿಯಮಿತ ಅವಧಿಯಲ್ಲಿ, ನಿಯಮಿತ ರೀತಿಯಲ್ಲಿ ಮಾಧ್ಯಮಗಳ ಸದ್ಬಳಕೆ ಮಾಡುವಂತೆ ಮಕ್ಕಳಿಗೆ ಕಲಿಸುವ, ತರಬೇತಿ ನೀಡುವ ಮೂಲಕ ಮಾತ್ರ ಪಾಲಕರು ತಮ್ಮ ಮಕ್ಕಳನ್ನು ಸರಿಯಾದ ದಾರಿಯಲ್ಲಿ ನಡೆಸ ಬಲ್ಲರು. ಇಲ್ಲಿ ಉಳಿದ ಎಲ್ಲರಿಗಿಂತ ಪಾಲಕರ ಪಾತ್ರ ಹೆಚ್ಚಿನದು.

### ಎಳೆಯರ ಗೊಂದಲ

ಒಂದು ಕಾಲದಲ್ಲಿ ಆಟ, ಪಾಠಗಳಲ್ಲಿ, ನೆರೆಹೊರೆಯವರ ಆರೈಕೆಯಲ್ಲಿ ಆನಂದಪಡುತ್ತಿದ್ದ ಮಕ್ಕಳು ಇಂದು ವೈಜ್ಞಾನಿಕ ಆಟಗಳಲ್ಲೇ ಮೈಮರೆಯುತ್ತಾರೆ. ಮಕ್ಕಳ ಪಾಲನೆ, ಪೋಷಣೆ ಗಳಿಗೆ ವಿಶೇಷ ಗಮನ ನೀಡುತ್ತಿದ್ದ ಹೆತ್ತವರಿಗೆ 'ಯಾವುದಕ್ಕೂ ಸಮಯವಿಲ್ಲ' ವೆಂಬ ಪರಿಸ್ಥಿತಿ ಬಂದೊದಗಿದೆ. (ಪೂರ್ತಿ ನಿಜ ವಲ್ಲ, ಮನರಂಜನೆಗಾಗಿ ಸಾಕಷ್ಟು ಸಮಯ ಲಭ್ಯವಿದೆ!) ಕ್ರಮೇಣ ಹದಿಹರೆಯ, ಯೌವನಕ್ಕೆ ಕಾಲಿಡುವ ಮಕ್ಕಳಲ್ಲಿ ಹುರುಪು, ಚೈತನ್ಯ, ಲವಲವಿಕೆ, ಧ್ಯೇಯಾದರ್ಶಗಳ ಬದಲು ನಿರ್ದಿಷ್ಟ ಗೊತ್ತುಗುರಿಯಿಲ್ಲದ ಒಂದು ಅವಸ್ಥೆ ಕಾಡುವಂತಾಗಿದೆ. ಹೆಚ್ಚೆಂ ದರೆ ಉನ್ನತ ವಿದ್ಯಾಭ್ಯಾಸ ಮಾಡಿ ಮುಗಿಸುವ, ಭಾರೀ ಸಂಬಳ ತರುವ ಉದ್ಯೋಗ ಗಳಿಸುವ ಗುರಿ ಹೊಂದಿರುವವರು ಬಹು ಪಾಲು ಯುವಜನರು. ಅವರಿಗೆ ಬೇರೆಯಾವ ಗುರಿ, ಆದರ್ಶ ಗಳೂ ಇಲ್ಲವೆ? ಉನ್ನತ ಮೌಲ್ಯ, ಧ್ಯೇಯ, ಸತ್ತ್ವಗಳಿಂದ ಪ್ರೇರಿತ ವಾದ ನಿರ್ದಿಷ್ಟ ಜೀವನಮಾರ್ಗ ಕಾಣಿಸಲಾರದೆ? ಕೀಳು ಅಭಿ ರುಚಿಯ ಹುಚ್ಚು ಹಿಡಿಸುವ ಮೀಡಿಯಾಗಳ ಬಲೆಗೆ ಬೀಳದೆ,

ತಮ್ಮಲ್ಲಿರುವ ಸುಪ್ತಪ್ರತಿಭೆಯನ್ನು ಹೊರಗೆಡಹುವ ಮಾರ್ಗ ಅವರಿಗೆ ತಿಳಿಯದೆ?

ಆಶ್ಚರ್ಯಕರವಾದ ಸಂಗತಿಯೆಂದರೆ, ಜೀವನದಲ್ಲಿ ಮೌಲಿಕವೆನ್ನಬಹುದಾದ ಗುಣಗಳನ್ನು ಕಲಿಸುವ, ತಮ್ಮ ಜೀವಂತ ನಿದರ್ಶನಗಳೊಂದಿಗೆ ತೋರಿಸಿಕೊಡುವ ಆದರ್ಶವ್ಯಕ್ತಿಗಳೇ ನಮ್ಮ ಮುಂದೆ ಇಲ್ಲವೇನೋ ಅನ್ನಿಸುವಷ್ಟು ಜಗತ್ತು ಬದಲಾಗುತ್ತಿದೆ. ಭ್ರಮೆಯ, ಬೆಡಗಿನ ಮಾಯಾಜಗತ್ತನ್ನೇ ನೈಜವೆಂಬಂತೆ ಬಿಂಬಿಸಿ, ಲಾಭ ಗಳಿಸುವ ಮಾಧ್ಯಮಗಳ ವ್ಯಾಪಾರೀಕರಣಕ್ಕೆ ಬಿಗಿಯಾದ ಕಡಿವಾಣ ಬೇಕಾಗಿದೆ. ಮರುಭೂಮಿಯಲ್ಲಿ ಇಂಗಿಹೋಗುವ ನೀರಿನ ಹನಿಯಂತೆ ಮಾಧ್ಯಮದ ನಡುವೆ ಎಲ್ಲೋ ಮಿಂಚಿ ಮರೆಯಾಗುವ ಸದ್ವಿಚಾರಗಳು ಕೇವಲ ವಿಡಂಬನೆಯಂತೆ ಭಾಸವಾಗುತ್ತವೆ. ಸುದ್ದಿಯನ್ನು ಬಿತ್ತರಿಸುವ ಪತ್ರಿಕೆ, ಟಿವಿ, ಹಾಗೂ ಇತರ ಸುದ್ದಿಜಾಲಗಳು ವ್ಯಾಪಾರೀಕರಣದ ನಡುವೆ ಜೀವನದ ಅತ್ಯಮೂಲ್ಯ ಅಂಶಗಳಿಂದ ಸಂಸ್ಕೃತಿ, ಮೌಲ್ಯ, ಧರ್ಮ, ನೀತಿ ಇವುಗಳಿಗೆ ಧಕ್ಕೆಯಾಗದಂತೆ ಎಚ್ಚರಿಕೆ ವಹಿಸಬೇಕಾದ ಆವಶ್ಯಕತೆಯಿದೆ.

**ಹೊಸ ಜಾಗೃತಿ**

ಇವೆಲ್ಲದರ ನಡುವೆ ನಮ್ಮಲ್ಲಿ ಎಚ್ಚರ ಮೂಡುತ್ತಿದೆ. ಹೊಸ ಬದುಕಿನಲ್ಲಿ ಹೊಸತನ್ನು ಕಟ್ಟುವ, ಜೊತೆಗೇ ನಮ್ಮದಾದ ಹಳೆಯ ಮೌಲ್ಯಗಳಿಗೆ ಪುನಶ್ಚೇತನ ನೀಡುವ ಪ್ರಾಮಾಣಿಕ ಪ್ರಯತ್ನ ನಡೆಯುತ್ತಿದೆ. ಈ ಪ್ರಯತ್ನಗಳು ಇಂದು ಪ್ರಜ್ಞಾವಂತ ವೈಯಕ್ತಿಕ ಅಭಿಪ್ರಾಯಗಳ ರೂಪಿನಲ್ಲಿ ಮೂಡಿ ಬರಬಹುದು; ಆದರೆ ನಾಳೆ ಅವು ಸಾಮೂಹಿಕ ಅಗತ್ಯವಾಗಿ ಹೊರಹೊಮ್ಮುತ್ತವೆ. ಹಾನಿಕಾರಕ ಅಂಶಗಳು ಅದಕ್ಕೂ ಸೋಲದಿದ್ದರೆ, ಸಮಾಜವೇ ದಂಗೆಯೇಳುವುದು ಮತ್ತೆ ಆರೋಗ್ಯಕರ ವ್ಯವಸ್ಥೆ ನೆಲೆನಿಲ್ಲುವ ತನಕ ಸಂಘರ್ಷ ಮುಂದುವರೆಯುವುದು. ಪಶ್ಚಿಮದ ಎಲ್ಲ ಪ್ರಭಾವಗಳನ್ನು ತಡೆದು ನಿಂತ ನಮ್ಮ ಸಮಾಜ, ಹೊಸ ಸವಾಲುಗಳನ್ನು ಎದುರಿಸಲಾರದೆ? ನಮ್ಮೊಳಗಿರುವ ಆಧ್ಯಾತ್ಮಿಕ ಸುತ್ತ ಶಕ್ತಿ ಹೊಸ ಹೊಸ ರೂಪಗಳಲ್ಲಿ ಪ್ರಕಟವಾಗಿ ಅದನ್ನೆದುರಿಸುವುದು.

**ಸ್ವಾಮೀಜಿ ಕಂಡ ಭಾರತ**

ಸ್ವಾಮಿ ವಿವೇಕಾನಂದರು ಭಾರತದ ಭವಿಷ್ಯವನ್ನು ಕಂಡು ಅತ್ಯಂತ ಭರವಸೆಯ ಮಾತುಗಳನ್ನಾಡಿದ್ದರು. ಪೂರ್ವ-ಪಶ್ಚಿಮಗಳ ಸಂಗಮದಿಂದ ಪ್ರಪಂಚವು ಪರಿಪೂರ್ಣ ಸಮಾಜದ ಮಾದರಿಯನ್ನು ನಿರ್ಮಿಸುವುದು ಎಂದು ಅವರು ನಂಬಿದ್ದರು. ಪಶ್ಚಿಮದಲ್ಲಿ ಆದ ವೈಜ್ಞಾನಿಕ, ತಾಂತ್ರಿಕ ಪ್ರಗತಿ ನಮ್ಮಲ್ಲಿಗೆ ಬರಬೇಕು; ಅದೇ ರೀತಿ ಆಧ್ಯಾತ್ಮಿಕ, ಧಾರ್ಮಿಕ ಕ್ಷೇತ್ರದಲ್ಲಿ ಪೂರ್ವದಲ್ಲಾದ ಬೆಳವಣಿಗೆ ಪಶ್ಚಿಮದಲ್ಲೆಲ್ಲ ಹರಡಬೇಕು – ಇದು ಅವರ ಕನಸಾಗಿತ್ತು. ಆಧ್ಯಾತ್ಮಿಕ ವಿಷಯದಲ್ಲಿ ಭಾರತ ವಿಶ್ವಕ್ಕೇ ಗುರುವಿನ ಸ್ಥಾನದಲ್ಲಿದೆ; ಸನಾತನಧರ್ಮ, ಧಾರ್ಮಿಕ ಸಹಬಾಳ್ವೆ ಹಾಗೂ ವಿಶ್ವವ್ಯಾಪಕ ಶಾಂತಿಯ ಸಂದೇಶ ಇವನ್ನು ಎಲ್ಲೆಡೆ ನಾವು ಸಾರಬೇಕು – ಎಂದು ಅವರು ಹೇಳುತ್ತಾರೆ.

ಸ್ವಾಮೀಜಿ ಹೇಳುತ್ತಾರೆ: ''ನಾವು ಹೊರಗೆ ಹೋಗಬೇಕು. ಕೊಟ್ಟು ತೆಗೆದುಕೊಳ್ಳುವುದರಲ್ಲಿದೆ ರಹಸ್ಯ. ನಾವು ಯಾವಾಗಲೂ ಪಾಶ್ಚಾತ್ಯರ ಪದತಳದಲ್ಲಿರಬೇಕೆ? ಪ್ರತಿಯೊಂದನ್ನೂ, ಧರ್ಮವನ್ನು ಕೂಡ ಅವರಿಂದ ಕಲಿಯಬೇಕೆ? ಅವರಿಂದ ಯಂತ್ರ ಕುಶಲತೆಯನ್ನು ಕಲಿತುಕೊಳ್ಳಬಹುದು. ಆದರೆ ಅವರಿಗೆ ನಾವು ಏನಾದರೂ ಕಲಿಸಬೇಕು. ಅದು ಯಾವುದೆಂದರೆ ನಮ್ಮ ಧರ್ಮ, ಅಧ್ಯಾತ್ಮವಿದ್ಯೆ. ಪೂರ್ಣ ನಾಗರಿಕತೆಗಾಗಿ ಜಗತ್ತು ಭರತಖಂಡದಲ್ಲಿ ಅನರ್ಘ್ಯ ರತ್ನಗಳಿಗಾಗಿ ಕಾಯುತ್ತಿದೆ..

''ಆಧ್ಯಾತ್ಮಿಕ ವಿದ್ಯೆಯನ್ನು ಅವರಿಗೆ ಕೊಟ್ಟು ಅವರ ವಿದ್ಯೆಯನ್ನು ನಾವು ಕಲಿಯೋಣ. ನಾವು ಯಾವಾಗಲೂ ವಿದ್ಯಾರ್ಥಿಗಳೇ ಆಗಿರುವುದಿಲ್ಲ. ಗುರು ಗಳೂ ಆಗುವೆವು. ಸಮಾನತೆಯಿಲ್ಲದೆ ಸ್ನೇಹವಿರಲಾರದು. ಒಬ್ಬರು ಯಾವಾಗಲೂ ಕಲಿಸುತ್ತ ಮತ್ತೊಬ್ಬರು ಯಾವಾಗಲೂ ಅವರ ಪಾದದಡಿ ಕಲಿಯುತ್ತಿದ್ದರೆ ಸಮಾನತೆ ಬರಲಾರದು. ನೀವು ಅಮೆರಿಕಾ ದೇಶದವರೊಂದಿಗೆ ಮತ್ತು ಇಂಗ್ಲಿಷರೊಂದಿಗೆ ಸರಿಸಮರಾಗಬೇಕಾದರೆ ನೀವು ಕಲಿಸಬೇಕು ಮತ್ತು ಕಲಿತುಕೊಳ್ಳಬೇಕು. ಇದನ್ನು ನಾವು ಮಾಡಬೇಕಾಗಿದೆ. ಶ್ರದ್ಧೆ ಪ್ರೋತ್ಸಾಹ ನಮ್ಮ ರಕ್ತದಲ್ಲಿರಬೇಕು.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೩, ಪು.೧೮೮-೮೯)*

''ವಿಶ್ವವೆಲ್ಲ ಏಕ. ಅಲ್ಲಿ ಮತ್ತೊಂದು ಇಲ್ಲ. ಭಿನ್ನತೆಯಿಂದ ನಾವೆಲ್ಲ ಏಕತ್ವದ ಕಡೆಗೆ ಹೋಗುತ್ತಿರುವೆವು. ಕುಲಗಳು ಪಂಗಡಗಳಲ್ಲಿ, ಪಂಗಡಗಳು ಜನಾಂಗಗಳಲ್ಲಿ, ಜನಾಂಗಗಳು ರಾಷ್ಟ್ರಗಳಲ್ಲಿ, ರಾಷ್ಟ್ರಗಳು ಮಾನವಕೋಟಿಯಲ್ಲಿ ಐಕ್ಯವಾಗುತ್ತಿವೆ. ಒಂದರಲ್ಲಿ ಎಷ್ಟೊಂದು ಇಚ್ಛೆಗಳು ಸೇರುತ್ತಿವೆ! ಈ ಏಕತೆಯ ಸಾಕ್ಷಾತ್ಕಾರವೇ ಜ್ಞಾನ ಮತ್ತು ವಿಜ್ಞಾನ.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೬, ಪು.೩೨೪-೨೫)*

ಇದು ಸಾಧ್ಯವಾಗುವುದು ನಮ್ಮ ಶೈಕ್ಷಣಿಕ, ಆರ್ಥಿಕ ಸಾಮಾಜಿಕ ವ್ಯವಸ್ಥೆ ಬಲಿಷ್ಠಗೊಂಡಾಗ ಮಾತ್ರ. ಸಮಾನತೆಯ, ಮಾನವೀಯತೆಯ ಆಧಾರದಲ್ಲಿ ಎಲ್ಲರ ದೈಹಿಕ, ಮಾನಸಿಕ, ಬೌದ್ಧಿಕ, ಆಧ್ಯಾತ್ಮಿಕ ಬೆಳವಣಿಗೆಗೆ ಸೂಕ್ತ ಪರಿಸರವಿದ್ದಾಗ ಮಾತ್ರ ಸಮಾಜ ಅತ್ಯಂತ ಆರೋಗ್ಯಕರವಾಗುವುದು. ಅಲ್ಲಿಂದ ಪ್ರತಿಭಾಶಾಲಿಗಳೂ, ಅಸಾಧಾರಣ ಮಹತ್ಕಾರ್ಯಗಳನ್ನು ಮಾಡುವವರೂ ಆದ ಯುವಕರು ಹೊರಬರುವರು. ಅಂಥ ಪರಿಸರವನ್ನು ನಿರ್ಮಿಸುವ ಜವಾಬ್ದಾರಿ ಇಡೀ ಸಮಾಜದ್ದಾಗಿದೆ. ಸಮಾಜವೆಂದಾಗ ಅಲ್ಲಿ ವ್ಯಕ್ತಿಗಳೂ ಮುಖ್ಯ; ಸಮಾಜದ ಅಂಗಗಳಾದ ಕುಟುಂಬ, ಜಾತಿ, ಪಂಗಡ, ಧರ್ಮಗಳೂ ಮುಖ್ಯ; ಆಡಳಿತ, ಶಿಕ್ಷಣ, ಕಾನೂನು – ಈ ವ್ಯವಸ್ಥೆಗಳೂ ಮುಖ್ಯ. 'ಬುನಾದಿ ಭದ್ರವಾಗಿದ್ದರೆ, ಅರಮನೆಯನ್ನಾದರೂ ಕಟ್ಟಬಹುದು' ಎಂಬಂತೆ, ನಮ್ಮ ಸಮಾಜದ ಬುನಾದಿಯಾಗಿರುವ ನಮ್ಮ ಸಂಸ್ಕೃತಿ ಮತ್ತು ಮೌಲ್ಯಗಳು ಮತ್ತಷ್ಟು ಬಲಿಷ್ಠವಾಗಬೇಕು. ಆಗ ಎಂಥ ಬದಲಾವಣೆಗಳೇ ಬರಲಿ, ನಮ್ಮ ಸಮಾಜ ಅಚಲವಾಗಿ ನಿಲ್ಲುವುದು. ✷

# ಸ್ವಾಮಿ ವಿಜ್ಞಾನಾನಂದರ ಸ್ಮೃತಿಗಳು

ಸ್ವಾಮಿ ಅಪೂರ್ವಾನಂದ

ನವೆಂಬರ್ ೨೫ರಂದು ಶ್ರೀರಾಮಕೃಷ್ಣರ ನೇರ ಶಿಷ್ಯರಲ್ಲಿ ಒಬ್ಬರಾದ ಸ್ವಾಮಿ ವಿಜ್ಞಾನಾನಂದರ (೧೮೬೮-೧೯೩೮) ಜಯಂತಿಯನ್ನು ಆಚರಿಸಲಾಗುತ್ತಿದೆ. ಈ ಸಂದರ್ಭದಲ್ಲಿ ಸ್ವಾಮಿ ಅಪೂರ್ವಾನಂದರು ರಚಿಸಿದ 'ಸ್ವಾಮಿ ವಿಜ್ಞಾನಾನಂದ ಕೇ ಪ್ರೇರಕ ಪ್ರಸಂಗ' ಎಂಬ ಹಿಂದೀ ಸಂಕಲನ ಗ್ರಂಥದಿಂದ ಆಯ್ದ ಭಾಗಗಳನ್ನು ಇಲ್ಲಿ ನೀಡುತ್ತಿದ್ದೇವೆ. ಇದನ್ನು ಚಳ್ಳಕೆರೆ ಶ್ರೀ ಶಾರದಾ ಆಶ್ರಮದ ಮಾತಾ ತ್ಯಾಗಮಯಿಯವರು ಸುಲಲಿತವಾಗಿ ಕನ್ನಡಕ್ಕೆ ಅನುವಾದಿಸಿಕೊಟ್ಟಿದ್ದಾರೆ.



ಸ್ವಾಮಿ ವಿಜ್ಞಾನಾನಂದರು ತಮ್ಮ ಆಧ್ಯಾತ್ಮಿಕ ಅನುಭವಗಳನ್ನು ಸಾಮಾನ್ಯವಾಗಿ ಹೇಳುತ್ತಿರಲಿಲ್ಲ. ಭಕ್ತರು ಯಾರಾದರೂ ಆ ವಿಚಾರವಾಗಿ ಕೇಳಿದರೆ ಅವರು ಇನ್ನಾವುದೋ ಹಾಸ್ಯ ವಿಚಾರವನ್ನು ಮಾತನಾಡಿ ಅದನ್ನು ಮರೆಯಿಸುತ್ತಿದ್ದರು. ಆದರೆ ಇತ್ತೀಚಿಗೆ ದರ್ಶನಾರ್ಥಿಗಳ ಭಕ್ತರ ಸಂಖ್ಯೆ ಅದೆಷ್ಟು ಅಧಿಕವಾಗಿದೆಯೆಂದರೆ ಮಾತುಕತೆಯ ನಡುವೆ ಒಂದಲ್ಲ ಒಂದು ಘಟನೆಯನ್ನು ಅವರು ಹೇಳುವಂತಾಗುತ್ತದೆ. ಒಂದು ದಿನ ಅವರು ಹೇಳಿದರು, ''ಇತ್ತೀಚಿಗೆ ನನಗೆ ಸ್ವಪ್ನಗಳು ಕಾಣಿಸುವುದಿಲ್ಲ, ನಾನೇ ಸ್ವಯಂಪ್ರಕಾಶಮಾನ ಆತ್ಮನೆಂದು ಉದ್ದಕ್ಕೂ ಅನ್ನಿಸುತ್ತಿದೆ. ಆದ್ದರಿಂದ ಸುಮ್ಮನೆ ಇರುತ್ತೇನೆ.''

''ಅದೊಂದು ದಿನ ನನಗೆ ದರ್ಶನವಾಯಿತು. ನಾನು ನೆಲದಿಂದ ಆಕಾಶದವರೆಗೆ ದಿಙ್ಮಂಡಲ ಪೂರ್ತಿಯಾಗಿ ವ್ಯಾಪಿಸಿಕೊಂಡಿದ್ದೇನೆ. ಅದನ್ನು ನೀವು ಕನಸು ಎನ್ನಿ ಅಥವಾ ಮತ್ತೇನಾದರೂ ಹೇಳಿ, ನನಗೆ ಮಾತ್ರ ಅನುಭವದಿಂದ ಬಹಳ ಆನಂದವಾಯಿತು. ಈಗಲೂ ನನಗೆ ಅದನ್ನು ಆಲೋಚಿಸುತ್ತಲೇ ಬಹಳ ಆನಂದವಾಗುತ್ತದೆ.''

ಒಂದು ದಿನ ಅವರು ಹೇಳಿದರು, ''ಉತ್ಸವ ಇತ್ಯಾದಿಗಳ್ನು ನೀವು ಮಕ್ಕಳ ಆಟ ಎಂದುಕೊಂಡಿದ್ದೀರಾ? ಹಾಗಲ್ಲ, ನಾವು ಮಾಡುವಂತಹ ಎಲ್ಲ ಕೆಲಸ-ಕಾರ್ಯ ಚಟುವಟಿಕೆಗಳು ಜ್ಞಾನವನ್ನು ಅಥವಾ ಪರಮಹಂಸಾವಸ್ಥೆಯನ್ನು ಪಡೆಯಲು ಇವೆ. ಆ ಸ್ಥಿತಿಯನ್ನು ನಾವು ಕರ್ಮದಿಂದಲೂ ಪಡೆಯಬಹುದು, ಸಾಧನೆ ಭಜನೆಯಿಂದಲೂ ಪಡೆಯಬಹುದು. ಅದರಲ್ಲಿ ವ್ಯತ್ಯಾಸವಿಲ್ಲ, ನಮ್ಮ ಎಲ್ಲ ಕರ್ಮಗಳ ಗುರಿಯೂ ಜ್ಞಾನ ಮತ್ತು ಆನಂದ ಪ್ರಾಪ್ತಿಯೇ ಆಗಿದೆ.''

''ನಿನ್ನೆ ಬೆಳಿಗ್ಗೆ ಒಂದು ಸುಂದರ ಭಾವ ಜಾಗೃತವಾಯಿತು. ಹಿಂದೆ ಸಾರಾನಾಥಕ್ಕೆ ಹೋಗುವ ಮೊದಲೂ ನನಗೆ ಅದೇ ಬಗೆಯ ಅನುಭವವಾಗಿತ್ತು. ಕಪ್ಪು ಬಣ್ಣದ ಹಾವಿನಂತಹ ವಸ್ತು ಕೆಳಗಿನಿಂದ ಮೇಲ್ಮುಖವಾಗಿ ಬಹಳ ವೇಗವಾಗಿ ಚಲಿಸುತ್ತಿತ್ತು. ಅದು ಬೇರೆ ಏನೂ ಅಲ್ಲ, ಕುಲಕುಂಡಲಿನಿ. ನನಗೆ ಬಹಳ ಆನಂದವಾಯಿತು.''

### ಶ್ರೀರಾಮಕೃಷ್ಣ ಮಠ, ಅಲಹಾಬಾದ್, ೧೮ ಫೆಬ್ರವರಿ, ೧೯೩೦

ಸಾಯಂಕಾಲ ಮಠಕ್ಕೆ ಕೆಲವು ಭಕ್ತರು ಬಂದಿದ್ದರು. ಸ್ವಾಮಿ ವಿಜ್ಞಾನಾನಂದರ ಮುಖಮಂಡಲ ದೀಪ್ತವಾಗಿತ್ತು. ಆದರೆ ಅವರ ಶರೀರಕ್ಕೆ ಬಹಳ ಶ್ರಮವಾಗಿರುವಂತೆ ಗೋಚರಿಸುತ್ತಿತ್ತು. ಅದರ ಕಡೆಗೆ ಅವರಿಗೆ ಸ್ವಲ್ಪವೂ ಗಮನವಿರಲಿಲ್ಲ. ಅವರು ಪಡಿಲಾ ಮಹಾದೇವನ ದರ್ಶನಕ್ಕಾಗಿ ಹೋಗಿದ್ದರು. ಅವರು ಹೇಳಿದರು, ''ನಿನ್ನೆ ಮಾತುಕತೆಯ ನಡುವೆ ಪಡಿಲಾ ಮಹಾದೇವನ ದರ್ಶನಕ್ಕೆ ಹೋಗುವುದಾಗಿ ಹೇಳಿದ್ದೆವು. ಹಾಗೆಂದು ನನಗೆ ಅಷ್ಟಾಗಿ ಹೋಗಬೇಕೆಂದು ಏನೂ ಇರಲಿಲ್ಲ. ನಾನು ಹೋಗುತ್ತಲೂ ಇರಲಿಲ್ಲ. ಆದರೆ ನಿನ್ನೆ ರಾತ್ರಿ ಒಂದು ಆಶ್ಚರ್ಯಕರ ದರ್ಶನವಾಯಿತು.'' ಹಾಗೆ ಹೇಳುತ್ತಲೇ ಅವರು ಅನ್ಯಮನಸ್ಕರಾದರು. ಸ್ವಲ್ಪ ಹೊತ್ತು ಮೌನವಾಗಿದ್ದು ಬಳಿಕ ಮೆಲ್ಲಮೆಲ್ಲನೆ ಹೇಳಿದರು, ''ಮೂಲಾಧಾರದಿಂದ ಬ್ರಹ್ಮರಂಧ್ರದವರೆಗೆ ಎಲ್ಲವೂ ಜ್ಯೋತಿಯಿಂದ ಪರಿಪೂರ್ಣವಾಗಿ ಬೆಳಗುತ್ತಿತ್ತು. ಅದು ಹೇಗಿತ್ತು ಎಂಬುದನ್ನು ಶಬ್ದ

ಗಳಲ್ಲಿ ಹೇಳಲಾಗದು. ನನಗನ್ನಿಸಿತು, ಅದು ಶಿವನ ಕೃಪೆ. ಶಿವ ಸರ್ವಶಕ್ತಿಮಯನಾಗಿದ್ದಾನೆ, ತಾಯಿ ಸರ್ವಶಕ್ತಿಮಯಿಯಾಗಿದ್ದಾಳೆ.'' ಸ್ವಲ್ಪ ಹೊತ್ತು ಮೌನವಾಗಿದ್ದು ಮತ್ತೆ ಹೇಳತೊಡಗಿದರು, ''ಅವನೇ ಎಲ್ಲವನ್ನೂ ಮಾಡುತ್ತಿದ್ದಾನೆ. ಅವನೇ ರಾಜನಾಗಿದ್ದಾನೆ, ಅವನೇ ಕಳ್ಳನಾಗಿದ್ದಾನೆ. ಜನ 'ನಾನು ಮಾಡುತ್ತೇನೆ' ಎಂದು ವ್ಯರ್ಥವಾಗಿ ಅಹಂಕಾರ ಪಡುತ್ತಾರೆ. ಎಲ್ಲವೂ ಅವನ ಇಚ್ಛೆ. ಅವನ ಇಚ್ಛೆಯೇ ಈಡೇರುತ್ತದೆ.''

**ಶ್ರೀರಾಮಕೃಷ್ಣ ಮಠ, ಅಲಹಾಬಾದ್, ೨೨ ಮಾರ್ಚ್, ೧೯೩೨**

ಇಂದು ಹೋಳಿಹಬ್ಬ. ಬೆಳಿಗ್ಗೆಯಿಂದಲೇ ಭಕ್ತರು ಬರುತ್ತಿದ್ದಾರೆ. ಭಕ್ತರು ಶ್ರೀರಾಮಕೃಷ್ಣರ ಶ್ರೀಚರಣಗಳಲ್ಲಿ ಅಬೀರ (ಮಂಗಳದ್ರವ್ಯ) ಅರ್ಪಿಸಿ ಸ್ವಾಮಿ ವಿಜ್ಞಾನಾನಂದಜೀ ಬಳಿಗೆ ಬಂದರು. ಒಬ್ಬ ಸಂನ್ಯಾಸಿ ಸ್ವಾಮೀಜಿಯವರ ಪಾದಗಳಿಗೆ ಅಬೀರ ಹಚ್ಚಿ ಆಶೀರ್ವದಿಸುವಂತೆ ಪ್ರಾರ್ಥಿಸಿದನು.ಸ್ವಾಮೀಜಿಯವರು ಅವನನ್ನು ಹೃತ್ಪೂರ್ವಕವಾಗಿ ಆಶೀರ್ವದಿಸಿದರು.

ಸ್ವಲ್ಪ ಹೊತ್ತಿನ ತರುವಾಯ ಸ್ವಾಮೀಜಿ ಹೇಳತೊಡಗಿದರು: ''ಶಕ್ತಿಶಾಲಿ ವ್ಯಕ್ತಿಗಳೊಡನೆ ವಾಸಿಸುವುದರಿಂದ ಜೀವಿ ತಾನೂ ಬಚಾವಾಗುತ್ತಾನೆ. ನಮ್ಮ ಮಠ ನೀಲಾಂಬರ ಬಾಬುಗಳ ತೋಟದ ಮನೆಯಲ್ಲಿದ್ದಾಗ ನಡೆದ ಘಟನೆ. ನಾವೆಲ್ಲ ಸ್ವಾಮಿ ವಿವೇಕಾನಂದರೊಡನೆ ಅಲ್ಲಿ ವಾಸಿಸುತ್ತಿದ್ದೆವು. ಅಂದು ದಶಹರಾ. ಆ ದಿನಗಳಲ್ಲಿ ಸ್ವಾಮೀಜಿ ಅದೆಷ್ಟು ಆಧ್ಯಾತ್ಮಿಕ ಶಕ್ತಿ ಸಂಪನ್ನರಾಗಿದ್ದರೆಂದು ಕೇಳಲೇಬೇಡಿ. ನಾನು ಅವರ ಪಾದಗಳನ್ನು ಸ್ಪರ್ಶಿಸಿ ಪ್ರಣಾಮ ಮಾಡಿದಾಗ ನನಗೆ ವಿದ್ಯುತ್ ಆಘಾತವಾದಂತಾಯಿತು. ಅವರ ಸಂಪರ್ಕಕ್ಕೆ ಬಂದವರೆಲ್ಲರಿಗೂ ಅವರೊಂದು ವಿಶಾಲ ಆಧ್ಯಾತ್ಮಿಕ ಸಾಮ್ರಾಜ್ಯವನ್ನು ಸಂಸ್ಥಾಪಿಸಿ ವಿರಾಜಮಾನರಾಗಿದ್ದಾರೆ ಎಂದೆನ್ನಿಸುತ್ತಿತ್ತು. ಅವರ ಸಾಮ್ರಾಜ್ಯದಲ್ಲಿ ಪ್ರವೇಶಿಸುವವರೆಲ್ಲರ ಒಳಗೂ ಆ ವಿದ್ಯುಚ್ಛಕ್ತಿ ನುಗ್ಗಿಬಿಡುತ್ತಿತ್ತು.''

**ಶ್ರೀರಾಮಕೃಷ್ಣ ಮಠ, ಅಲಹಾಬಾದ್ ಏಪ್ರಿಲ್ ೧೯೩೨**

ಸಾಯಂಕಾಲದ ಸಮಯ. ಕೆಲವು ಸಾಧುಗಳು ಮತ್ತು ಭಕ್ತರು ಸ್ವಾಮಿ ವಿಜ್ಞಾನಾನಂದಜಿವರ ಬಳಿಗೆ ಬಂದರು. ಸಾರನಾಥದಿಂದ ಕೆಲವು ಮಂದಿ ಅಧ್ಯಾಪಕರೂ ಬಂದಿದ್ದರು. ಹಿಂದೆ ಸ್ವಾಮೀಜಿಯವರು ಕಾಶಿಯಿಂದ ಸಾರಾನಾಥಕ್ಕೆ ಹೋಗಿದ್ದಾಗ ಒಬ್ಬ ಪ್ರೊಫೆಸರ್ ಅಲ್ಲಿನ ದೇವಸ್ಥಾನಗಳು ಹಾಗೂ ದರ್ಶನೀಯ ಸ್ಥಳಗಳನ್ನು ಅವರಿಗೆ ತೋರಿಸಿದ್ದನು. ಸಾರಾನಾಥದಲ್ಲಿ ನಡೆಯುತ್ತಿದ್ದ ಸಂಶೋಧನೆಗಳನ್ನು ಕುರಿತಂತೆ ಮಾತುಕತೆ ಆರಂಭವಾಯಿತು. ಸ್ವಾಮೀಜಿ ಹೇಳಿದರು, ''ಸಾರಾನಾಥದಲ್ಲಿ ಪ್ರಥಮ ಬಾರಿಗೆ ಸಂಶೋಧನೆ ನಡೆದ ಮೇಲೆ ವಿವಿಧ ಜಾಗಗಳಲ್ಲಿ ಸ್ಥಾಪಿಸಲಾದ ಮೂರ್ತಿಗಳನ್ನು ನೋಡಿದಾಗ, ಆ ಎಲ್ಲ ವಿಗ್ರಹಗಳೂ ಜೀವಂತವಾಗಿರುವಂತೆ ಕಾಣಿಸಿದವು. ಆ ವಿಗ್ರಹಗಳು ಅಷ್ಟು ಗಂಭೀರವಾಗಿದ್ದವು, ಸುಂದರವಾಗಿದ್ದವು! ಆ ಬಳಿಕ ಆ ಮೂರ್ತಿಗಳನ್ನು ಸಂಗ್ರಹಾಲಯದಲ್ಲಿರಿಸಿದ ಮೇಲೆ ಅವುಗಳ ಗಾಂಭೀರ್ಯ ಹೊರಟುಹೋದಂತೆ ಅನ್ನಿಸಿತು. ಆದರೂ ಮಹಾಪುರುಷರ ವಿಗ್ರಹ ಅಥವಾ ಚಿತ್ರಗಳು ಎಲ್ಲೇ ಇರಲಿ, ಹೇಗೇ ಇರಲಿ, ಅವು ಯಾವಾಗಲೂ ಜೀವಂತವಾಗಿರುತ್ತದೆ ಹಾಗೂ ಅವುಗಳಿಂದ ನಮಗೆ ಹೊಸ ಹೊಸ ಪ್ರಚೋದನೆ ಸಿಗುತ್ತಲೇ ಇರುತ್ತದೆ.

''ಬಹುಶಃ ೧೯೧೮ರಲ್ಲಿ ನಾನು ಕಾಶಿಗೆ ಹೋಗಿದ್ದಾಗ, ಒಂದು ದಿನ ಬೆಳಿಗ್ಗೆಯೇ ನಾನು ಕಾಲ್ನಡಿಗೆಯಲ್ಲಿ ಸಾರಾನಾಥಕ್ಕೆ ಹೋದೆ. ಸಾರಾನಾಥಕ್ಕೆ ಹೋಗಬೇಕೆಂದೇನೂ ನಿಶ್ಚಯಿಸಿರಲಿಲ್ಲ. ಆದರೆ ವಾಯುವಿಹಾರಕ್ಕೆ ಹೋದಾಗ ಸಾರಾನಾಥಕ್ಕೆ ಹೋಗಬೇಕೆಂದು ಅನ್ನಿಸಿತು. ಸಾರಾನಾಥಕ್ಕೆ ಹೋಗಿ ಆಚೆ-ಈಚೆ ಹುಡುಕುತ್ತಿರುವಾಗ ಒಬ್ಬ ಮಾರ್ಗದರ್ಶಿ ಬಂದು, 'ಅಲ್ಲೊಂದು ಶಿಲೆಯಲ್ಲಿ ಬುದ್ಧನ ಜನ್ಮದಿಂದ ಮಹಾನಿರ್ವಾಣದವರೆಗಿನ ಸಮಗ್ರ ಜೀವನ ಚರಿತ್ರೆ ಚಿತ್ರಿತವಾಗಿದೆ' ಎಂದನು. ಅನಂತರ ಅವನು ನನ್ನನ್ನು ಅಲ್ಲಿಗೆ ಕರೆದೊಯ್ದನು. ಆ ಮೂರ್ತಿಗಳನ್ನು ನಾನು ಅತ್ಯಂತ ಆಶ್ಚರ್ಯಚಕಿತನಾಗಿ ನೋಡುತ್ತಿರುವಾಗ ನನಗೊಂದು ಅಲೌಕಿಕ ದರ್ಶನವಾಯಿತು. ಇದಕ್ಕೆ ಮೊದಲೂ ಹಲವಾರು ತೀರ್ಥಕ್ಷೇತ್ರ ಅಥವಾ ದೇವಸ್ಥಾನಗಳಲ್ಲಿ ಹಲವು ಬಗೆಯ ದರ್ಶನಗಳಾಗಿದ್ದರೂ, ಈ ಬಗೆಯ ದರ್ಶನ ಹಿಂದೆ ಎಂದೂ ಆಗಿರಲಿಲ್ಲ.

''ಇದ್ದಕ್ಕಿದ್ದಂತೆ ನಿರಾಕಾರ ಜ್ಯೋತಿಯ ಸಮುದ್ರ ಕಾಣಿಸಿತು. ಇಡೀ ಬ್ರಹ್ಮಾಂಡವು ಅದರಲ್ಲಿ ಕರಕರಗಿ ಹೋಗುತ್ತಿದೆ. ನಾನು ಒಂದು ಬಿಂದುವಾಗಿ ಆ ಜ್ಯೋತಿಸಮುದ್ರದ ದಡದ ಮೇಲೆ ನಿಂತು, ಅತ್ಯಂತ ಆಶ್ಚರ್ಯದಿಂದ ಅದನ್ನು ನೋಡುತ್ತಿದ್ದೇನೆ. ಆಗ ನನ್ನಲ್ಲಿ 'ನಾನು' ಸ್ವಲ್ಪವೂ ಇರಲಿಲ್ಲ. ಕ್ಷಣಮಾತ್ರದಲ್ಲಿ ಇಡೀ ವಿಶ್ವವು ಆ ಚೇತನ ಸಮುದ್ರದಲ್ಲಿ ವಿಲೀನವಾಯಿತು. ಆ ಸಮುದ್ರದಿಂದಲೇ ಬುದ್ಧ ಪ್ರಕಟನಾದನು. ಅತ್ಯಂತ ಶಾಂತ, ಪ್ರಸನ್ನ ಪ್ರೇಮಮಯ ರೂಪ! ಈಗ ನಿಮ್ಮೊಡನೆ ಇದನ್ನು ಹೇಳುವಾಗಲೂ ಆಗ ಅನುಭವಿಸಿದ ಅಪಾರ ಆನಂದವೇ ಅನುಭವಕ್ಕೆ ಬರುತ್ತಿದೆ. ಅದೇ ಸ್ಥಿತಿಯಲ್ಲಿ ಬಹಳ ಹೊತ್ತು ಇದ್ದೆ. ಆಗ ದೂರದಿಂದ ಯಾರೋ ಮಾತನಾಡುತ್ತಿರುವಂತೆ, ಗಾರ್ಡಿನ ಧ್ವನಿ 'ಮುಂದಕ್ಕೆ ಹೋಗೋಣ. ಮುಂದಕ್ಕೆ ಹೋಗೋಣ' ಎಂದು ಕೇಳಿಸಿತು. ಆಗ ನನಗೆ ಬಾಹ್ಯಜ್ಞಾನ ಬಂದಿತು. ಗೈಡ್ ನಾನು ನಿದ್ದೆ ಮಾಡುತ್ತಿದ್ದೇನೆ ಎಂದು ಭಾವಿಸಿದನು. ಗೈಡ್‌ನ ಮಾತನ್ನು ಕೇಳಿ ಮುಂದೆ ನಡೆಯತೊಡಗಿದೆ. ಆದರೆ ನಾನು ಮತ್ತನಂತೆ ಇದ್ದೆ. ಸಾಯಂಕಾಲ ೫:೦೦ ಗಂಟೆಗೆ ನಾನು ಕಾಶಿಯ ಸೇವಾಶ್ರಮವನ್ನು ತಲುಪಿದಾಗ ಪ್ರತಿಯೊಬ್ಬರೂ, 'ನೀವು ಇಡೀದಿನ ಎಲ್ಲಿಗೆ ಹೋಗಿದ್ದಿರಿ? ನಿಮ್ಮ ಊಟವನ್ನು ಮುಚ್ಚಿ ಇಡಲಾಗಿದೆ' ಎಂದರು. ನಾನು, 'ನನಗೆ ಊಟ ಮಾಡಲು ಮನಸ್ಸಿಲ್ಲ' ಎಂದು ಹೇಳಿ ಸುಮ್ಮನೆ ಹೋಗಿ ಮಲಗಿಬಿಟ್ಟೆ. ಆಗಲೂ ನಾನು ಆನಂದೋನ್ಮತ್ತನಾಗಿದ್ದೆ. ಮೂರು ದಿನಗಳವರೆಗೆ ನನ್ನೊಳಗೆ ಅದೇ ಭಾವದ ಉನ್ಮಾದ ತುಂಬಿಕೊಂಡಿತ್ತು.''

...ಒಬ್ಬ ಭಕ್ತ ಕೇಳಿದ, ''ಶ್ರೀ ಜಗನ್ನಾಥಸ್ವಾಮಿ ದೇವಸ್ಥಾನದ ಪ್ರಾಂಗಣದಲ್ಲಿ ಬಹಳಷ್ಟು ಅಶ್ಲೀಲ ಹಾಗೂ ಬೀಭತ್ಸ ಮೂರ್ತಿಗಳನ್ನು ಕೆತ್ತನೆ ಮಾಡಿರುವರಲ್ಲ! ಅದಕ್ಕೆ ಕಾರಣವೇನು? ಅವನ್ನು ಕಂಡಾಗ ಮನಸ್ಸಿನಲ್ಲಿ ದುರ್ಭಾವನೆಗಳು ಬರುವಂತಾಗುತ್ತದೆ.''

ಸ್ವಾಮೀಜಿ, ''ಮಂದಿರದ ಪ್ರಾಂಗಣದಲ್ಲಿರುವ ಚಿತ್ರಗಳೆಲ್ಲ ಪ್ರಾಪಂಚಿಕರಿಗೆ ಸಂಬಂಧಿಸಿದವು. ಅವುಗಳಲ್ಲಿಯೇ ಜಗತ್ತು ಮತ್ತವಾಗಿದೆ. ಅವನ್ನೆಲ್ಲ ದಾಟಿ, ಪ್ರಾಪಂಚಿಕತೆಯನ್ನು ಬಿಟ್ಟು ದೇವಸ್ಥಾನದ ಒಳಗೆ ಹೋಗಿ ಪವಿತ್ರ ಹೃದಯದಿಂದ ಭಗವಂತನ ದರ್ಶನ-ಸ್ಪರ್ಶನ ಮಾಡಿದಾಗಲೇ ವ್ಯಕ್ತಿ ಮುಕ್ತನಾಗುತ್ತಾನೆ. ದೇವಸ್ಥಾನದ ಹೊರಗೆ ಜಗತ್ತು ಇದೆ! ದೇವಸ್ಥಾನದ ಒಳಗೆ ಭಗವಂತ ಇದ್ದಾನೆ!'' ತಮ್ಮ ಜಗನ್ನಾಥದರ್ಶನವನ್ನು ಕುರಿತು ಸ್ವಾಮೀಜಿ ಹೇಳುತ್ತಾರೆ, ''ಒಂದು ದಿನ ನಾನು ಜಗನ್ನಾಥ ಸ್ವಾಮಿಯನ್ನು ಆಲಂಗಿಸಿದೆನು. ಅವನ ಶ್ರೀವಿಗ್ರಹವು ಬೆಣ್ಣೆಯ ಹಾಗೆ ಅತ್ಯಂತ ಕೋಮಲವಾಗಿತ್ತು.''

### ಶ್ರೀರಾಮಕೃಷ್ಣ ಮಠ, ಅಲಹಾಬಾದ್, ೧೪ ಜುಲೈ, ೧೯೩೨

ಭಕ್ತರೊಬ್ಬರು, ''ಶ್ರೀರಾಮಕೃಷ್ಣರು ತಮ್ಮ ಶಿಷ್ಯರನ್ನು ಹೇಗೆ ಪರೀಕ್ಷಿಸುತ್ತಿದ್ದರು? ಅವರು ನಿಮ್ಮನ್ನು ಹೇಗೆ ಪರೀಕ್ಷಿಸಿದರು?'' ಎಂದು ಕೇಳಿದಾಗ ಸ್ವಾಮೀಜಿ ಹೇಳಿದರು, ''ನನಗೆ ಚೆನ್ನಾಗಿ ನೆನಪಿದೆ, ಶ್ರೀರಾಮಕೃಷ್ಣರು ನನಗೆ, 'ನಿನ್ನೊಳಗೆ ಆಧ್ಯಾತ್ಮಿಕ ಶಕ್ತಿಯು ದೀಪದ ಕುಡಿಯಂತೆ ಪ್ರಕಾಶಮಾನವಾಗಿ ಬೆಳಗುತ್ತಿದೆ' ಎಂದು ಹೇಳಿದರು. ಆಗ ನನಗೆ ಚಿಕ್ಕ ವಯಸ್ಸು. ಆಗ ನನಗೆ ಅದೆಲ್ಲ ಹೇಗೆ ಅರ್ಥವಾಗಬೇಕು? ಶ್ರೀರಾಮಕೃಷ್ಣರಿಗೆ ಗಂಟಲುನೋವು ಆರಂಭವಾಗುವ ವೇಳೆಗೆ ನಾನು ಬಾಂಕೀಪುರಕ್ಕೆ ಹೋಗಿದ್ದೆನು. ನಾನು ಇದ್ದ ಮನೆಯಲ್ಲಿ ಈಗ ಮಿಶನ್ನಿನ ಆಶ್ರಮ ಪ್ರಾರಂಭವಾಗಿದೆ. ನಾನು ಅಲ್ಲಿ ಇದ್ದಾಗಲೆ ನನಗೆ ವೃತ್ತಪತ್ರಿಕೆಗಳಿಂದ ಶ್ರೀರಾಮಕೃಷ್ಣರ ಮಹಾಸಮಾಧಿಯ ವಿಚಾರ ಗೊತ್ತಾಯಿತು. ಅದರ ಹಿಂದಿನ ರಾತ್ರಿ ನನಗೆ ಶ್ರೀರಾಮಕೃಷ್ಣರ ದರ್ಶನವಾಗಿತ್ತು. ಅವರು ನನ್ನ ಮುಂದೆ ನಿಂತಿರುವುದನ್ನು ನೋಡಿದೆ. ಶ್ರೀರಾಮಕೃಷ್ಣರು ಏಕೆ ಬಂದಿದ್ದಾರೆ ಎಂದು ನನಗೆ ಆಶ್ಚರ್ಯವಾಯಿತು. ಮರುದಿನ ವೃತ್ತಪತ್ರಿಕೆಗಳಿಂದ ವಿಷಯ ಗೊತ್ತಾಯಿತು.

''ಸ್ವಾಮೀಜಿಯವರ ಮಹಾಸಮಾಧಿಯಾದಾಗಲೂ ನನಗೆ ಇದೇ ಬಗೆಯ ದರ್ಶನವಾಗಿತ್ತು. ಅಲಹಾಬಾದಿನ ಬ್ರಹ್ಮವಾದಿನ್ ಕ್ಲಬ್‌ನ ಗರ್ಭಗೃಹದಲ್ಲಿ ಧ್ಯಾನವನ್ನು ಮಾಡುತ್ತಿರುವಾಗ ಸ್ವಾಮೀಜಿ ಶ್ರೀರಾಮಕೃಷ್ಣರ ಮಡಿಲಿನಲ್ಲಿ ಕುಳಿತಿರುವುದನ್ನು ಕಂಡೆ. ಎಂತಹ ವಿಚಿತ್ರ ದೃಶ್ಯ ಎಂದು ನನಗನ್ನಿಸಿತು. ಬಳಿಕ ಬೇಲೂರು ಮಠದಿಂದ ಸ್ವಾಮೀಜಿಯವರ ಮಹಾಸಮಾಧಿಯ ಟೆಲಿಗ್ರಾಂ ಬಂದಿತು.''

ಸ್ವಲ್ಪ ಹೊತ್ತು ಮೌನವಾಗಿದ್ದು ಸ್ವಾಮೀಜಿ ಮತ್ತೆ ಹೇಳತೊಡಗಿದರು, ''ನಾನು ದೇಹತ್ಯಾಗ ಮಾಡಿದ ಮೇಲೆ ಎಲ್ಲಿಗೆ ಹೋಗುತ್ತೇನೆ ಎಂಬ ಪ್ರಶ್ನೆ ನನ್ನ ಮನಸ್ಸಿನಲ್ಲಿ ಏಳುತ್ತದೆ. ಮಹಾಪುರುಷ ಮಹಾರಾಜರನ್ನು ಕೇಳಿದಾಗ ಅವರು, 'ನಾವು ರಾಮಕೃಷ್ಣ ಲೋಕಕ್ಕೆ ಹೋಗುತ್ತೇವೆ. ಅಲ್ಲಿ ರಾಮಕೃಷ್ಣರಿದ್ದಾರೆ ಹಾಗೂ ನಾವೂ ಅಲ್ಲಿಯೇ ಇರುತ್ತೇವೆ' ಎಂದಿದ್ದರು. ಆದರೆ ನಾನು ಯಾವ ಲೋಕಕ್ಕೂ ಹೋಗುವುದಿಲ್ಲ ಎಂದು ನಿರ್ಧರಿಸಿಬಿಟ್ಟಿದ್ದೇನೆ. ಶ್ರೀರಾಮಕೃಷ್ಣರನ್ನು ನಿರಂತರ ಸ್ಮರಿಸುವುದರಿಂದ, ಅವರನ್ನು ಒಂದುಕ್ಷಣವೂ ಮರೆಯದಿರುವುದರಿಂದ ನಾವು ಸದಾ ಅವರೊಂದಿಗೆ ಇದ್ದೇವೆ ಎಂದೇ ಅರ್ಥ. ನನ್ನ ದೇಹ-ಮನ-ಪ್ರಾಣಗಳು ಸರ್ವದಾ ಶ್ರೀರಾಮಕೃಷ್ಣರ ಚಿಂತನೆಯಲ್ಲಿ, ಶ್ರೀರಾಮಕೃಷ್ಣರ ಭಾವದಲ್ಲೇ ಮುಳುಗಿರುವಾಗ, ಒಂದು ಕ್ಷಣವೂ ಅವರನ್ನು ಮರೆಯದಿರುವಾಗ ನಾವು ಎಲ್ಲಿದ್ದರೂ ರಾಮಕೃಷ್ಣಲೋಕದಲ್ಲಿ ಇರುವಂತೆಯೇ ಆಯಿತು. ನಾವು ಪವಿತ್ರರಾದಷ್ಟೂ ಶ್ರೀರಾಮಕೃಷ್ಣರು ನಮ್ಮೊಂದಿಗೆ ಹೆಚ್ಚು ಇರುತ್ತಾರೆ.''

### ಶ್ರೀರಾಮಕೃಷ್ಣ ಮಠ, ಅಲಹಾಬಾದ್, ೬ ಫೆಬ್ರವರಿ, ೧೯೩೩

ಸಾಯಂಕಾಲದ ಸಮಯ. ಸ್ವಾಮಿ ವಿಜ್ಞಾನಾನಂದಜಿಯವರ ಹತ್ತಿರ ಕೆಲವು ಸಂನ್ಯಾಸಿಗಳು ಹಾಗೂ ಭಕ್ತರು ಕುಳಿತುಕೊಂಡಿದ್ದಾರೆ. ವಿಭಿನ್ನ ವಿಷಯಗಳನ್ನು ಕುರಿತು ಮಾತುಕತೆ ಮುಗಿದ ಮೇಲೆ ಸ್ವಾಮಿ ವಿಜ್ಞಾನಾನಂದಜಿಯವರು ಹೇಳುತ್ತಾರೆ, ''ಮೂರು-ನಾಲ್ಕು ದಿನಗಳ ಹಿಂದೆ ಒಂದು ಸುಂದರ ಕನಸು ಬಿದ್ದಿತ್ತು. ನಾನು ನಡೆದು ಹೋಗುತ್ತಿರುವಾಗ ಒಂದು ಶಿವ ದೇವಸ್ಥಾನ ಸಿಕ್ಕಿತು. ನೋಡಿದೆ, ದೇವಸ್ಥಾನದ ಬಾಗಿಲಿನಲ್ಲಿಯೇ ಶ್ರೀರಾಮಕೃಷ್ಣರು ಹೂವುಗಳನ್ನು ಮತ್ತು ಪೂಜಾ ಸಾಮಗ್ರಿಗಳನ್ನು ಹಿಡಿದುಕೊಂಡು ನಿಂತಿದ್ದರು. ನಾನು ಶ್ರೀರಾಮಕೃಷ್ಣರನ್ನು ಗುರುತಿಸಿದೆ. ಆದರೆ ಅವರು ಇಷ್ಟು ದಿನಗಳಾದ ಮೇಲೆ ನನ್ನನ್ನು ಗುರುತಿಸುತ್ತಾರೆಯೋ ಇಲ್ಲವೋ ಎಂದು ನನಗೆ ಶಂಕೆಯಾಯಿತು. ಅವರ ಹತ್ತಿರ ಹೋಗುತ್ತಲೇ ಅವರು, 'ನೀನು? ಇಲ್ಲಿ?' ಎಂದರು. ಅನಂತರ ನನ್ನ ತಲೆಯ ಮೇಲೆ ಕೈಇಟ್ಟು ಆಶೀರ್ವದಿಸಿದರು. ಅಷ್ಟು ಹೊತ್ತಿಗೆ ನನಗೆ ಎಚ್ಚರವಾಯಿತು. ಆಗ ನಾನು ಆಲೋಚಿಸಿದೆ, ಶ್ರೀರಾಮಕೃಷ್ಣರು ನನ್ನನ್ನು ಗುರುತಿಸದೆ ಇರಲು ಹೇಗೆ ಸಾಧ್ಯ? ಅವರು ಭೂತ, ವರ್ತಮಾನ ಭವಿಷ್ಯತ್ತನ್ನು ಬಲ್ಲವರು - ತ್ರಿಕಾಲದರ್ಶಿ ಹಾಗೂ ಕಾಲ-ಅಕಾಲಕ್ಕೆ ಅತೀತರು. ಅವರು ಎಲ್ಲರನ್ನೂ ನೆನಪಿನಲ್ಲಿಟ್ಟು ಕೊಳ್ಳುತ್ತಾರೆ - ಜೀವ ಜಂತು, ಕ್ರಿಮಿ-ಕೀಟಗಳನ್ನೂ.

''ಆಗ ನನಗೆ ೧೭-೧೮ ವರ್ಷ. ನಾನು ಕಾಲೇಜಿನಲ್ಲಿ ಓದುತ್ತಿದ್ದೆ. ಒಂದು ದಿನ ಶ್ರೀರಾಮಕೃಷ್ಣರ ಬಳಿಗೆ ಹೋದಾಗ ನಾನು 'ಭಗವಂತ ಸಾಕಾರನೋ, ನಿರಾಕಾರನೊ?' ಎಂದು ಪ್ರಶ್ನಿಸಿದೆ. ಅವರು ಹೇಳಿದರು, 'ಭಗವಂತ ಸಾಕಾರನೂ ಹೌದು, ನಿರಾಕಾರನೂ ಹೌದು. ಸಾಕಾರ-ನಿರಾಕಾರ ಎರಡನ್ನೂ ಮೀರಿರುವವನೂ ಹೌದು.' ಆಗ ನನ್ನ ಮನಸ್ಸಿನಲ್ಲಿ, ' ಹಾಗಾದರೆ ಕಣ್ಣಿಗೆ ಗೋಚರಿಸುವ ವಸ್ತುಗಳೆಲ್ಲ ಭಗವಂತನೇ ಏನು?' ಎಂಬ ಪ್ರಶ್ನೆ ಉದಿಸಿತು. ಆಗ ಶ್ರೀರಾಮಕೃಷ್ಣರು ಮತ್ತೂ ದೃಢವಾಗಿ ಹೇಳಿ

ದರು, 'ಹೌದು ಈ ತಟ್ಟೆಯೂ ಬ್ರಹ್ಮ, ಲೋಟವೂ ಬ್ರಹ್ಮ, ಈ ಗೋಡೆಯೂ ಬ್ರಹ್ಮ. ಕಣ್ಣಿಗೆ ಕಾಣಿಸುವ ವಸ್ತುಗಳೆಲ್ಲವೂ ಭಗವಂತನೇ ಆಗಿದ್ದಾನೆ.' ಅವರ ಮಾತನ್ನು ಕೇಳಿ ನನಗೆ ಬಹಳ ಆಶ್ಚರ್ಯವಾಯಿತು. ಆ ಕ್ಷಣ ನನ್ನೊಳಗೆ ಬ್ರಹ್ಮಜ್ಯೋತಿಯ ದರ್ಶನವಾಯಿತು.''

ಸ್ವಾಮಿ ವಿಜ್ಞಾನಾನಂದಜಿಯವರು ಹೇಳುತ್ತಾರೆ, ''ಶ್ರೀರಾಮಕೃಷ್ಣರ ವ್ಯಕ್ತಿತ್ವ ಅದ್ಭುತವಾದುದು - ಅಸಾಧಾರಣವಾದುದು. ಅವರ ಭಾವಚಿತ್ರ ಅವರು ಷಟ್‌ಚಕ್ರಗಳನ್ನು ಭೇದಿಸಿರುವುದನ್ನು ತಿಳಿಸುತ್ತದೆ. ಅದು ಅವರು ಆನಂದಸಾಗರದಲ್ಲಿ ಮುಳುಗಿರುವುದನ್ನು ಹೇಳುತ್ತದೆ. ನಾನು ಇದನ್ನೆಲ್ಲ ಅಕ್ಷರಶಃ ನೋಡುತ್ತಿದ್ದೇನೆ. ಆದ್ದರಿಂದ ಹೇಳುತ್ತಿರುವೆ. ಸ್ವಾಮಿ ಬ್ರಹ್ಮಾನಂದಜಿ, ಸ್ವಾಮಿ ವಿವೇಕಾನಂದರು ಈ ನಿಗೂಢ ಮಾತುಗಳನ್ನು ಹೇಳುತ್ತಿರಲಿಲ್ಲ. ಅವರ ಅಂಗ-ಪ್ರತ್ಯಂಗಗಳಲ್ಲಿ ಆಧ್ಯಾತ್ಮಿಕ ಶಕ್ತಿ ನಿರಂತರವಾಗಿ ಪ್ರವಹಿಸುತ್ತಿತ್ತು. ಸಾಮಾನ್ಯ ಮನುಷ್ಯನ ಮೆದುಳಿನಲ್ಲಿ ಯತ್ಕಿಂಚಿತ್ ಶಕ್ತಿ ಜಾಗೃತವಾಗುತ್ತಲೆ ಅವನು ರಸಾಯನ ಶಾಸ್ತ್ರಜ್ಞ, ಕವಿ, ವಿದ್ವಾಂಸನಾಗುತ್ತಾನೆ. ಶ್ರೀರಾಮಕೃಷ್ಣರ ಶಕ್ತಿ ಅದ್ಭುತವಾದದ್ದು, ಅಸೀಮವಾದದ್ದು. ಅವರು ಇಚ್ಛಾಮಾತ್ರದಿಂದ ಸೂರ್ಯಲೋಕ, ಚಂದ್ರಲೋಕ, ನಕ್ಷತ್ರಲೋಕ, ಬ್ರಹ್ಮಲೋಕಗಳಿಗೆ ಸಂಚರಿಸಿ ಬರುತ್ತಿದ್ದರು. ಒಂದು ದಿನ ಅವರು ನನಗೆ ತಮ್ಮ ಭಾವಚಿತ್ರವನ್ನು ತೋರಿಸಿ ಹೇಳಿದರು, 'ನೋಡು, ನಾನು ಒಳಗೆ ಇದ್ದೇನೆ. ನೀನು ಇದನ್ನು ಧ್ಯಾನಮಾಡು.' ಶ್ರೀರಾಮಕೃಷ್ಣರ ಈ ಭಾವಚಿತ್ರದಲ್ಲಿ ಎಲ್ಲವೂ ಅಡಕವಾಗಿದೆ. ನಿಮಗೂ ಇವೆಲ್ಲ ಕ್ರಮಕ್ರಮೇಣ ಮನವರಿಕೆಯಾಗುತ್ತದೆ. ಶ್ರೀರಾಮಕೃಷ್ಣರೇ ಅದನ್ನು ನಿಮಗೆ ತಿಳಿಯಪಡಿಸುತ್ತಾರೆ. ತಮ್ಮಲ್ಲಿ ಶರಣಾಗತರಾದವರಿಂದ ಯಾವ ಯಾವ ಕಾರ್ಯಗಳನ್ನು ಮಾಡಿಸಬೇಕು ಅವನ್ನೆಲ್ಲ ಅವರೇ ಮಾಡಿಸುತ್ತಾರೆ. ಇಷ್ಟೆಲ್ಲ ಆಗಿಯೂ ಅವರು ಸದಾ ಬಾಲಕ ಭಾವದಲ್ಲಿರುತ್ತಿದ್ದರು.''

### ಶ್ರೀರಾಮಕೃಷ್ಣ ಮಠ, ಅಲಹಾಬಾದ್, ೯ ಮಾರ್ಚ್, ೧೯೩೩

ಸ್ವಾಮಿ ವಿಜ್ಞಾನಾನಂದಜಿಯವರು ವಾಲ್ಮೀಕಿ ರಾಮಾಯಣವನ್ನು ಇಂಗ್ಲೀಷಿಗೆ ತರ್ಜುಮೆ ಮಾಡುತ್ತಿದ್ದರು. ಬಾಲಕಾಂಡ ಹಾಗೂ ಅಯೋಧ್ಯಾಕಾಂಡದ ಅಧ್ಯಾಯಗಳನ್ನು ಪ್ರೆಸ್‌ಗೆ ಕಳುಹಿಸಿಯಾಗಿತ್ತು. ಆ ಪುಸ್ತಕದ ಮೊದಲ ಪುಟಗಳಲ್ಲಿಯೇ ಶ್ರೀರಾಮ, ಸೀತೆ, ಭರತ, ಲಕ್ಷಣ, ಶತ್ರುಘ್ನ ಹಾಗೂ ಹನುಮಂತನನ್ನು ಒಳಗೊಂಡ ಶ್ರೀರಾಮ ಪಟ್ಟಾಭಿಷೇಕದ ಚಿತ್ರವಿದ್ದಿತು. ಆ ಗ್ರಂಥವನ್ನು ಎಲ್ಲ ರೀತಿಯಿಂದ ಪರಿಪೂರ್ಣವಾಗಿ ಹೊರತರಲು ಸ್ವಾಮೀಜಿ ಬಹಳ ಗಮನವನ್ನು ವಹಿಸುತ್ತಿದ್ದರು. ಇತ್ತೀಚೆಗೆ ಅವರು ಯಾವಾಗಲೂ ರಾಮ-ಸೀತೆಯರ ಭಾವದಲ್ಲಿಯೇ ತನ್ಮಯರಾಗಿರುತ್ತಿದ್ದರು. ಒಂದು ದಿನ ಅವರು ಒಟ್ಟುಸೇರಿದ ಭಕ್ತರಿಗೆ ಹೇಳುತ್ತಿದ್ದಾರೆ: ''ಕೆಲವು ದಿನಗಳ ಹಿಂದೆ ನಾನು ಹೊರಗೆ ಮಲಗಿದ್ದೆ. ಇದ್ದಕ್ಕಿದ್ದಂತೆ ನನಗೆ ಶ್ರೀರಾಮಕೃಷ್ಣರ ಮಾತು ನೆನಪಾಯಿತು. ಒಂದು ದಿನ ಅವರು ನನ್ನ ಹತ್ತಿರ, 'ಏನು, ನನ್ನ ಬಿಲ್ಲುಬಾಣ ಎಲ್ಲಿದೆ?' ಎಂದು ಕೇಳಿದ್ದರು. ಆದ್ದರಿಂದ ನನಗನ್ನಿಸುತ್ತಿದೆ, ಶ್ರೀರಾಮಕೃಷ್ಣ ಮತ್ತು ಶ್ರೀಮಾತೆಯವರ ಚಿತ್ರವನ್ನು ರಾಮಾಯಣದಲ್ಲಿ ಹಾಕಬೇಕು.. ಒಂದು ದಿನ ಶ್ರೀರಾಮಕೃಷ್ಣರು ನನಗೆ ಹೇಳಿದ್ದರು, 'ನಿಜವಾಗಿ ಹೇಳುತ್ತೇನೆ, ನಾನು ೧೪ ವರ್ಷಗಳ ಕಾಲ ತಿನ್ನಲಿಲ್ಲ, ಮಲಗಲಿಲ್ಲ.' ಲಕ್ಷ್ಮಣನೂ ಇದೇ ರೀತಿ ಇದ್ದನು. ರಾಮ-ಲಕ್ಷ್ಮಣರಿಬ್ಬರೂ ಅಭಿನ್ನ, ಅವರಿಬ್ಬರೂ ವಿಷ್ಣುವಿನ ಅವತಾರ. ಶ್ರೀರಾಮಕೃಷ್ಣರು ಸ್ವಾಮಿ ವಿವೇಕಾನಂದರಿಗೆ, 'ಯಾರು ರಾಮನೋ, ಯಾರು ಕೃಷ್ಣನೋ ಅವನೇ ಈ ಯುಗದಲ್ಲಿ ರಾಮಕೃಷ್ಣನಾಗಿದ್ದಾನೆ' ಎಂದು ಹೇಳಿದ್ದರು. ಅದನ್ನು ನೀವು ಪುಸ್ತಕದಲ್ಲಿ ಓದಿರುತ್ತೀರಿ. ಆದರೆ ಒಂದು ದಿನ ಭಾವಾವಸ್ಥೆಯಲ್ಲಿ ಶ್ರೀರಾಮಕೃಷ್ಣರು ನನ್ನ ಹತ್ತಿರ ಅತೀವ ಪ್ರೇಮ-ವಿಶ್ವಾಸದಿಂದ ಹೇಳಿದ್ದರು, 'ನಾನು ಹದಿನಾಲ್ಕು ವರ್ಷ ವನದಲ್ಲಿ ಇದ್ದೆನು.' '' ಶ್ರೀರಾಮಕೃಷ್ಣರನ್ನು ಕುರಿತು ಮಾತನಾಡುತ್ತಾ, ಸ್ವಾಮಿ ವಿಜ್ಞಾನಾನಂದಜಿಯವರೂ ಭಾವೋನ್ಮತ್ತರಾದರು. ಅವರ ಮಾತು ಮೂಕವಾಯಿತು. ಅವರು ತಮ್ಮ ಭಾವದಲ್ಲಿಯೇ ಮುಳುಗಿಬಿಟ್ಟರು.

### ಶ್ರೀರಾಮಕೃಷ್ಣ ಮಠ, ಅಲಹಾಬಾದ್, ೧ನೇ ಜನವರಿ, ೧೯೩೪

ಸ್ವಾಮಿ ವಿಜ್ಞಾನಾನಂದಜಿಯವರು ಹೇಳಿದರು: ''ದಕ್ಷಿಣೇಶ್ವರದ ಆ ಸಣ್ಣ ಕೋಣೆಯಲ್ಲಿ ಇದ್ದುಕೊಂಡು ಶ್ರೀರಾಮಕೃಷ್ಣರು ಒಂದು ದೊಡ್ಡ ಜಾದೂ ಮಾಡಿಬಿಟ್ಟರು. ಕೆಲವರು ಶ್ರೀರಾಮಕೃಷ್ಣರನ್ನು ಏಸುಕ್ರಿಸ್ತನೊಂದಿಗೆ ಹೋಲಿಸುತ್ತಾರೆ. ಆದರೆ ಶ್ರೀರಾಮಕೃಷ್ಣರನ್ನು ಏಸುವಿನೊಂದಿಗೆ ಹೋಲಿಸಲಾಗದು. ಶ್ರೀರಾಮಕೃಷ್ಣರು ಅತಿ ಅದ್ಭುತ, ಅತ್ಯುಚ್ಚ ಶ್ರೇಣಿಯ ಸಂತರಾಗಿದ್ದರು.. ಅವರಿಗೆ ಬಾರಿಬಾರಿಗೂ ಸಮಾಧಿಯಾಗುತ್ತಿತ್ತು - ಅದನ್ನು ನೋಡಿದಾಗಲೇ ಗೊತ್ತಾಗುತ್ತದೆ. ಏಸುಕ್ರಿಸ್ತ ಯಾವಾಗಲೂ ಪ್ರಾರ್ಥನೆ ಮಾಡುತ್ತಿದ್ದ. ಆದರೆ ಶ್ರೀರಾಮಕೃಷ್ಣರಲ್ಲಿ ದಿನ ಬೆಳಗಾದರೆ ಸಮಾಧಿಯೇ. ಶ್ರೀರಾಮಕೃಷ್ಣರಲ್ಲಿ ಭಾವ, ಮಹಾಭಾವ ಮತ್ತು ಸಮಾಧಿಗಳು ಮತ್ತೆ ಮತ್ತೆ ಕಂಡುಬರುವಂತೆ ಇನ್ನಾರಲ್ಲಿಯೂ ಕಾಣಬರುವುದಿಲ್ಲ.''

''ಆ ದಿನಗಳಲ್ಲಿ ಮಠ ಗಂಗೆಯ ದಡದಲ್ಲಿರುವ ನೀಲಾಂಬರ ಬಾಬುಗಳ ತೋಟದ ಮನೆಯಲ್ಲಿ ಇತ್ತು. ನಾವೆಲ್ಲರೂ ಆಗ ಅಲ್ಲಿ ವಾಸಿಸುತ್ತಿದೆವು. ಒಂದು ದಿನ ಸ್ವಾಮೀಜಿ ಮಾತನಾಡುತ್ತ ಹೇಳಿದರು ಶ್ರೀರಾಮಕೃಷ್ಣರಂತಹ ಇನ್ನೊಬ್ಬ ವ್ಯಕ್ತಿಯನ್ನು ನೀವು ನೋಡಿರಲಾರಿರಿ. ನನ್ನ ಮಾತನ್ನು ನಂಬಿರಿ ಧಾರ್ಮಿಕ ಇತಿಹಾಸದಲ್ಲಿ ಇಂತಹ ಇನ್ನೊಬ್ಬ ವ್ಯಕ್ತಿ ಕಾಣಸಿಗುವುದಿಲ್ಲ. ಅವರು ಅವತಾರಗಳಲ್ಲಿ ಸರ್ವಶ್ರೇಷ್ಠರು.''

### ಶ್ರೀರಾಮಕೃಷ್ಣ ಮಠ, ಅಲಹಾಬಾದ್, ೧೨ ಜನವರಿ, ೧೯೩೪

ಸ್ವಾಮಿ ವಿಜ್ಞಾನಾನಂದಜಿಯವರು ಹೇಳುತ್ತಿದ್ದಾರೆ, ''ನಾನು ಇತ್ತೀಚೆಗೆ ಬೈಬಲ್ ಓದುತ್ತಿದ್ದೇನೆ. ಅದರಲ್ಲಿ ಅತ್ಯಂತ ಗೂಢ

ವಿಚಾರಗಳನ್ನೆಲ್ಲ ಹೇಳಲಾಗಿದೆ. ಅವು ಸತ್ಯ. ಆದ್ದರಿಂದ ಅವು ಮಾರ್ಗದರ್ಶಕ. ನಮ್ಮ ಋಷಿಗಳ ಮಾತೂ ಎಷ್ಟು ಶಕ್ತಿಪೂರ್ಣ ಹಾಗೂ ಉದ್ದೀಪಕವಾಗಿವೆ! ಅವರು ಹೇಳಿದುದೆಲ್ಲ ತಮ್ಮ ಸಾಕ್ಷಾತ್ಕಾರದ ಅನುಭವದಿಂದ ಹೇಳಿದ್ದು, ಬುದ್ಧಿ ಚಮತ್ಕಾರದಿಂದ ಅಲ್ಲ. ಅವರು ಬೋಧಿಸಿದ ಸತ್ಯಗಳು ತ್ರಿಕಾಲಾಬಾಧಿತ ಸತ್ಯಗಳು, ಶಾಶ್ವತ ಸತ್ಯಗಳು.

''ಶುಕದೇವ ಹಿಮಾಲಯದಲ್ಲಿ ತಪೋನಿರತನಾದಾಗ ಅವನಿಗೆ ನಾಲ್ಕೂ ದಿಕ್ಕುಗಳಿಂದ 'ಬ್ರಹ್ಮ, ಬ್ರಹ್ಮ' ಎಂಬ ಶಬ್ದ ಕೇಳಿಬರುತ್ತಿತ್ತು. ಎಲ್ಲ ಪರ್ವತಗಳೂ ಬ್ರಹ್ಮ ಎಂಬ ಶಬ್ದವನ್ನೇ ಪ್ರತಿಧ್ವನಿಸುತ್ತಿದ್ದವು. ಆ ಜ್ಯೋತಿ ಹೇಗಿದೆ ಗೊತ್ತೆ? ಅತ್ಯಂತ ಮಧುರ, ಸ್ನಿಗ್ಧ. ಅದು ಆನಂದದ ಜ್ಯೋತಿ, ಶಾಂತಿ ಮತ್ತು ಜ್ಞಾನದ ಜ್ಯೋತಿ – ಚಿದ್ಘನ. ಅದೇ ಜ್ಯೋತಿಯನ್ನು ನಾನು ಸಾರಾನಾಥನ ಮ್ಯೂಸಿಯಂನಲ್ಲಿ ಬುದ್ಧನ ಮೂರ್ತಿಯಲ್ಲಿ ನೋಡಿದ್ದೆ. ಒಂದು ಅನಂತ, ಅಖಂಡ ಜ್ಯೋತಿ ಸಮುದ್ರ – ಅದರಲ್ಲಿ ನಾನು ಒಂದು ಬಿಂದುವಾಗಿದ್ದೆ. ಆ ಬ್ರಹ್ಮಸಮುದ್ರದ ಧ್ವನಿ ಸಮುದ್ರದ ಧ್ವನಿಯ ಹಾಗೆಯೇ ಇತ್ತು. ಆದರೆ ಅತಿ ಮಧುರ ಧ್ವನಿ. ಕ್ರಮೇಣ ಇಡೀ ಜಗತ್ತು ಅದರಲ್ಲಿ ವಿಲೀನವಾಯಿತು. ನಾನೂ ಇಲ್ಲ, ದೇಹ ಬೋಧೆಯೇ ಇಲ್ಲ. ಅದೆಂತಹ ಅದ್ಭುತ ಆನಂದ! ಈಗಲೂ ಆ ಅನಿರ್ವಚನೀಯ ಆನಂದವನ್ನು ನೆನಪಿಸಿಕೊಂಡಾಗ ರೋಮಾಂಚನವಾಗುತ್ತದೆ!''

### ಶ್ರೀರಾಮಕೃಷ್ಣ ಮಠ. ಅಲಹಾಬಾದ್, ೧೬ ಜನವರಿ ೧೯೩೭

ಸ್ವಾಮಿ ವಿಜ್ಞಾನನಂದಜೀ ಭಕ್ತರಿಗೆ ಹೇಳುತ್ತಿದ್ದಾರೆ: ''ಉಳಿದೆಲ್ಲ ಅವತಾರಗಳು ಭಗವಂತನನ್ನು ತಂದೆ ಎಂದು ಕರೆದಿದ್ದಾರೆ. ಶ್ರೀರಾಮಕೃಷ್ಣರೊಬ್ಬರೇ ಭಗವಂತನನ್ನು ಅಮ್ಮಾ ಎಂದು ಕರೆದಿದ್ದಾರೆ. ತಾಯಿ ಅವರಿಗೆ ತಮ್ಮ ಸರ್ವಸ್ವವೂ ಆಗಿದ್ದಳು. ಒಂದು ದಿನ ಕೇಶವಸೇನ, 'ಅವರನ್ನು ನೀವು ಯಾವಾಗಲೂ ಅಮ್ಮಾ, ಅಮ್ಮಾ ಎಂದು ಏಕೆ ಕರೆಯುತ್ತೀರಿ?' ಎಂದು ಕೇಳಿದ. ಅದಕ್ಕೆ ಶ್ರೀರಾಮಕೃಷ್ಣರು, 'ನೀನು ಅಸೀಮ ಸಾಗರವನ್ನು ನೋಡಿದ್ದೀಯೆ, ಅನಂತ ಆಕಾಶವನ್ನು ನೋಡಿದ್ದೀಯೆ. ಜಗತ್ತಿನಲ್ಲಿ ಶಕ್ತಿಯ ಇಷ್ಟೊಂದು ಅಭಿವ್ಯಕ್ತಿಯನ್ನು ನೋಡಿಯೂ ನೀನು ನನ್ನ ತಾಯಿಯನ್ನು ಗುರುತಿಸಲಿಲ್ಲವೆ? ಅವಳ ಶಕ್ತಿಯನ್ನು ಅರಿಯಲಿಲ್ಲವೆ? ತಾಯಿ ಸರ್ವಶಕ್ತಿಮಯಿ; ಅವಳೇ ಎಲ್ಲವೂ ಆಗಿದ್ದಾಳೆ. ಅವಳ ಕೃಪೆಯಿಲ್ಲದೆ ಏನನ್ನೂ ಅರಿಯಲಾಗದು. ಅಮ್ಮಾ ಎಂದು ಕರೆದಾಗ ನಮಗೆ ಹೆಚ್ಚಿನ ಶಕ್ತಿ ಲಭಿಸುತ್ತದೆ. ಅವಳೇ ತಾಯಿಯಾಗಿ ಪೃಥ್ವಿಯನ್ನು, ಆಕಾಶವನ್ನು ಧರಿಸಿದ್ದಾಳೆ. ತಾಯಿಯನ್ನು ಬಿಟ್ಟು ತಂದೆಯನ್ನು ಅರಿಯಲಾಗುವುದಿಲ್ಲ. ತಾಯಿಯೇ ತಂದೆಯನ್ನು ತೋರಿಸಿಕೊಡುತ್ತಾಳೆ.' ಆಗ ಕೇಶವಸೇನ ಒಪ್ಪಿದ, ಭಗವಂತನನ್ನು ತಾಯಿ ಎಂದು ಕರೆದು ಪೂಜಿಸತೊಡಗಿದ.''

### ಶ್ರೀರಾಮಕೃಷ್ಣ ಮಠ, ಅಲಹಾಬಾದ್, ೨೧ ಜನವರಿ, ೧೯೩೭

ಸ್ವಾಮೀಜಿ ಹೇಳುತ್ತಿದ್ದಾರೆ: ''ತ್ರಿವೇಣಿಯಲ್ಲಿ ಸ್ನಾನಮಾಡಲು ಎಲ್ಲ ದೇವತೆಗಳು, ಸಾಧುಗಳು ಹಾಗೂ ಮಹಾಪುರುಷರು ಬರುತ್ತಾರೆ. ಅವರು ಆಗಮಿಸದಿದ್ದರೆ ಆ ಸ್ಥಾನ ತೀರ್ಥವಾಗಲಾರದು. ಬೆಳಿಗ್ಗೆ, ಮಧ್ಯಾಹ್ನ, ಸಂಜೆ ಮತ್ತು ಮಧ್ಯರಾತ್ರಿ – ಈ ನಾಲ್ಕು ಹೊತ್ತುಗಳು ಬಹಳ ಮಹತ್ವಪೂರ್ಣವಾದುದು. ತಾಯಿ ತ್ರಿವೇಣಿ ನನಗೆ ದರ್ಶನವನ್ನು ಕೊಟ್ಟಿದ್ದಳು. ಅದನ್ನು ನಿಮಗೆ ಬಹಳ ಸಲ ಹೇಳಿದ್ದೇನೆ. ಸಂಗಮದಲ್ಲಿ ಮುಳುಗಿ ಮೇಲಕ್ಕೆ ಏಳುತ್ತಲೇ ತಾಯಿಯ ಮೂರು ಜಡೆಗಳಿಂದ ಕೂಡಿದ ಸುಂದರ ಬಾಲಿಕಾಮೂರ್ತಿ ಕಾಣಿಸಿತು. ಬಳಿಕ ರಾಖಾಲ ಮಹಾರಾಜ್ (ಸ್ವಾಮಿ ಬ್ರಹ್ಮಾನಂದರು) ಅದನ್ನು ಕೇಳಿ, 'ನಿಜವಾಗಿಯೂ ದೇವಿ ನಿನಗೆ ದರ್ಶನವನ್ನು ಕೊಟ್ಟಿದ್ದಳು' ಎಂದು ಹೇಳಿದರು. ಒಂದು ದರ್ಶನ ಸತ್ಯವೋ ಅಲ್ಲವೋ ಎಂದು ತಿಳಿಯಲು ಉಪಾಯವಿದು. ಸತ್ಯದರ್ಶನವು ನಮಗೆ ಜ್ಞಾನ ಮತ್ತು ಆನಂದವನ್ನು ಕೊಡುತ್ತದೆ ಮತ್ತು ಅದರ ಪ್ರಭಾವ ದೀರ್ಘಕಾಲ ಇರುತ್ತದೆ. ತಾಯಿಯ ದರ್ಶನವನ್ನು ಸ್ಮರಿಸಿದಾಗ ಈಗಲೂ ನನಗೆ ಆನಂದವಾಗುತ್ತದೆ.

''ಒಂದು ಸಲ ಕಾಶಿಯಲ್ಲಿ ಶಿವನೂ ನನಗೆ ದರ್ಶನ ಕೊಟ್ಟ. ಕಾಶೀಧಾಮದಲ್ಲಿ ಶ್ರೀರಾಮಕೃಷ್ಣ ಸೇವಾಶ್ರಮದ ವಾರ್ಡನ್ನು ಕಟ್ಟಿಸಲು ನಾನು ಅಲಹಾಬಾದಿನಿಂದ ಕಾಶಿಗೆ ಹೋಗುತ್ತಿದ್ದೆ. ಕಾಶೀ ಸ್ಟೇಷನ್ನಿನಿಂದ ಸೈಕಲ್ ರಿಕ್ಷಾದಲ್ಲಿ ಸೇವಾಶ್ರಮಕ್ಕೆ ಹೋಗುತ್ತಿದ್ದೆ. ಒಂದು ಕಡೆಯಲ್ಲಿ ರಿಕ್ಷಾ ತಲೆಕೆಳಗಾಗಿ ಬಿತ್ತು. ನಾನೂ ಬಿದ್ದುಬಿಟ್ಟೆ. ನನ್ನ ಕಾಲುಗಳು ಅದರ ಅಡಿಯಲ್ಲಿ. ಅದರ ಮೇಲೆ ಒಂದು ಭಾರದ ಪೆಟ್ಟಿಗೆ ಬಿತ್ತು. ನನ್ನ ಕಾಲಿಗೆ ಬಹಳ ಪೆಟ್ಟಾಯಿತು. ಹೇಗೋ ಇನ್ನೊಂದು ರಿಕ್ಷಾದಲ್ಲಿ ಸೇವಾಶ್ರಮ ತಲುಪಿದೆ. ಅಲ್ಲಿ ಡಾಕ್ಟರರು ತಕ್ಕ ಚಿಕಿತ್ಸೆ ಮಾಡಿದರು. ಬಹಳ ಜ್ವರ ಬಂದು ಬಿಟ್ಟಿತ್ತು. ನಾನು ಜ್ವರದಿಂದ ಒದ್ದಾಡುತ್ತ, 'ಹೇ ವಿಶ್ವನಾಥ, ಶ್ರೀರಾಮಕೃಷ್ಣರ ಕಾರ್ಯಕ್ಕಾಗಿ ನಿನ್ನ ವಲಯಕ್ಕೆ ಬಂದಿದ್ದೇನೆ. ಇದು ನಿಸ್ವಾರ್ಥ ಕಾರ್ಯ. ಆದರೂ ಏಕೆ ಈ ಜ್ವರ?' ಎಂದು ಯೋಚಿಸುತ್ತಾ ಮಲಗಿಬಿಟ್ಟೆ. ರಾತ್ರಿ ಒಂದು ಅಥವಾ ಎರಡು ಗಂಟೆ, ಮಂದಹಾಸದಿಂದ ಕೂಡಿದ ಜಟಾಜೂಟಧಾರಿ ಭಗವಾನ್ ಶಿವ ಕಣ್ಮುಂದೆ ನಿಂತಿದ್ದ. ನಾನು ಯೋಚಿಸಿದೆ, 'ಏನು, ಶಿವ ನನ್ನನ್ನು ಕರೆದು ಕೊಂಡುಹೋಗಲು ಬಂದಿದ್ದಾನೇನು? ಈಗ ನಾನು ಹೋಗುವುದಿಲ್ಲ, ನಾನು ಶ್ರೀರಾಮಕೃಷ್ಣರ ಕಾರ್ಯವನ್ನು ಮೊದಲು ಮಾಡಬೇಕಾಗಿದೆ.' ಆದರೆ ನನ್ನ ಮಾತನ್ನು ಕೇಳುವವರಾರು? ಅವನು ಮಂದಹಾಸದೊಡನೆ ಮುಂದೆ ಬಂದ. ನನ್ನನ್ನು ಗಾಢವಾಗಿ ಆಲಂಗಿಸಿಕೊಂಡ. ಒಡನೆಯೇ ನನ್ನ ಇಡೀ ಶರೀರ ಮಂಜಿನಂತೆ ತಂಪಾಯಿತು. ನಾನು ಹೇಳಿದೆ, 'ಪ್ರಭು, ಈಗ ನೀನು ಹೋಗು, ಶ್ರೀರಾಮಕೃಷ್ಣರ ಕಾರ್ಯವನ್ನು ಮಾಡುವುದು ಉಳಿದಿದೆ.' ಆಗ ಶಿವ ನಗುನಗುತ್ತ ಹೊರಟುಹೋದ. ಆಶ್ಚರ್ಯವೆಂದರೆ, ಬೆಳಿಗ್ಗೆ ಏಳುತ್ತಲೇ ಜ್ವರ ಪೂರ್ತಿಯಾಗಿ ವಾಸಿಯಾಗಿತ್ತು, ಗಾಯಗಳೂ ಒಣಗಿ ಹೋಗಿದ್ದವು.''

### ಶ್ರೀರಾಮಕೃಷ್ಣ ಮಠ, ಅಲಹಬಾದ್, ೧ ಫೆಬ್ರವರಿ ೧೯೩೭

ಸ್ವಾಮಿ ವಿಜ್ಞಾನಾನಂದಜೀ ಹೇಳಿದರು: ''ನಿನ್ನೆ ರಾತ್ರಿ ಧ್ಯಾನಕ್ಕೆ ಸಂಬಂಧಿಸಿದಂತೆ ಒಂದು ಸುಂದರ ಭಾವನೆ ಬಂತು. ಧ್ಯಾನ

ಮಾಡಲು ಹೃದಯ, ಭ್ರೂಮಧ್ಯ ಮತ್ತು ಸಹಸ್ರಾರ – ಇವು ಮೂರು ಉತ್ತಮ ಸ್ಥಾನಗಳು. ಶ್ರೀರಾಮಕೃಷ್ಣರು ಹೃದಯದಲ್ಲಿ ಧ್ಯಾನ ಮಾಡುವುದೇ ಶ್ರೇಷ್ಠವಾದುದು ಎಂದು ಹೇಳುತ್ತಿದ್ದರು. ಹನುಮಂತ ತನ್ನ ಎದೆಯನ್ನು ಬಗೆದು, ಅಲ್ಲಿ ರಾಮ, ಸೀತೆಯರನ್ನು ತೋರಿಸಿದ್ದನು. ಹೃದಯದ ಅಂತರಾಳದಲ್ಲಿ ಧ್ಯಾನವನ್ನು ಮಾಡಬೇಕು. ಆದರೆ ಎಷ್ಟು ಜನರಿಗೆ ತಾನೆ ಹೃದಯಾಂತರಾಳಕ್ಕೆ ಹೋಗಲು ಬರುತ್ತದೆ? ಶ್ರೀರಾಮಕೃಷ್ಣರು ಹೇಳಿದ್ದಾರೆ, 'ನನ್ನ ಭಾವಚಿತ್ರವನ್ನು ಧ್ಯಾನ ಮಾಡು. ಅದರಿಂದಲೇ ಎಲ್ಲವನ್ನೂ ಪಡೆಯುತ್ತೀಯೆ' ಅಂತ. ಆದ್ದರಿಂದ ಪೂರ್ಣ ಮನಸ್ಸಿನಿಂದ ಶ್ರೀರಾಮಕೃಷ್ಣರ ಭಾವಚಿತ್ರವನ್ನು ಧ್ಯಾನಿಸಿ. ಅವರು ಜ್ಯೋತಿರ್ಮಯ, ಸತ್ಪ್ರಕಾಶಮಯ ಮತ್ತು ಸರ್ವವ್ಯಾಪಿಯಾಗಿದ್ದಾರೆ. ಅವರ ಬೆಳಕು ಎಲ್ಲ ಕಡೆ ತುಂಬಿಕೊಂಡಿದೆ.''

## ಶ್ರೀರಾಮಕೃಷ್ಣ ಮಠ, ಅಲಹಾಬಾದ್, ೧೦ ಫೆಬ್ರವರಿ, ೧೯೩೭

ಸ್ವಾಮಿ ವಿಜ್ಞಾನಾನಂದಜಿಯವರು ತಮ್ಮ ಕುರಿತು ಹೇಳುತ್ತಿದ್ದಾರೆ: ''ಸ್ವಾಮಿ ವಿವೇಕಾನಂದರು, 'ನಾನು ಪೇಸನ್‌ಗೆ ('ಪ್ರಶಾಂತ', ವಿಜ್ಞಾನಾನಂದರ ಹಿಂದಿನ ಹೆಸರು) ಹೆಚ್ಚೇನನ್ನೂ ಹೇಳಲಾರೆ. ನಾನು ಅವನ ಒಳಗೆ ಸಾಕ್ಷಾತ್ ಶ್ರೀರಾಮಕೃಷ್ಣರನ್ನೇ ನೋಡುತ್ತಿದ್ದೇನೆ' ಎಂದು ಹೇಳುತ್ತಿದ್ದರು. ಆಗ ನಾನು, 'ಅವರು ಸರ್ವಭೂತಗಳಲ್ಲಿ ಇದ್ದಾರೆ. ನೀವು ನಿಮ್ಮ ಅಂತರ್ದೃಷ್ಟಿಯಿಂದ ನನ್ನೊಳಗೆ ರಾಮಕೃಷ್ಣರನ್ನು ನೋಡಬಲ್ಲಿರಿ. ಅದರಲ್ಲಿ ಆಶ್ಚರ್ಯವೇನು?' ಎಂದೆ. ಆಗ ಸ್ವಾಮೀಜಿ, 'ಇಲ್ಲ, ಪೇಸನ್, ಹಾಗಲ್ಲ, ಶ್ರೀರಾಮಕೃಷ್ಣರು ನಿನ್ನೊಳಗೆ ದೊಡ್ಡ ಜಾಗವನ್ನು ಮಾಡಿಕೊಂಡು ಕುಳಿತಿದ್ದಾರೆ. ನಾನು ಅದನ್ನು ಪ್ರತ್ಯಕ್ಷವಾಗಿ ನೋಡುತ್ತಿದ್ದೇನೆ' ಎಂದರು. ಆಗ ನನಗೆ ಅವೆಲ್ಲ ಎಷ್ಟು ಅರ್ಥವಾಯಿತೋ, ಬಿಟ್ಟಿತ್ತೋ – ಆದರೆ ಅದನ್ನು ಕೇಳಿ ಬಹಳ ಆನಂದವಾಗುತ್ತಿತ್ತು.''

## ಶ್ರೀರಾಮಕೃಷ್ಣ ಮಠ, ಅಲಹಾಬಾದ್, ೧೭ ಫೆಬ್ರವರಿ ೧೯೩೭

ಸ್ವಾಮಿ ವಿಜ್ಞಾನಾನಂದಜಿಯವರು ಹೇಳುತ್ತಿದ್ದಾರೆ: ''ಮಧ್ಯರಾತ್ರಿ ಧ್ಯಾನವನ್ನು ಮಾಡಲು ಬಹಳ ಒಳ್ಳೆಯ ಸಮಯ. ಆಗ ಅತಿಶೀಘ್ರವಾಗಿ ಫಲ ದೊರೆಯುತ್ತದೆ. ಆಗ ಪ್ರಕೃತಿ ಶಾಂತವಾಗಿ ಇರುತ್ತದೆ. ಮನಸ್ಸು ಬೇಗ ಸ್ಥಿರವಾಗುತ್ತದೆ. ಎಲ್ಲ ಕಡೆ ವಾತಾವರಣ ಶಾಂತವಾಗಿರುವಾಗ ಮನಸ್ಸನ್ನು ಸಂಯಮಗೊಳಿಸುವುದು ಸುಲಭವಾಗುತ್ತದೆ. ಸ್ವಾಮೀಜಿ ಮಧ್ಯರಾತ್ರಿಯಲ್ಲಿ ಧ್ಯಾನ ಮಾಡುತ್ತಿದ್ದರು. ಆಗ ಅವರ ಕೋಣೆ ಇದ್ದಕ್ಕಿದ್ದಂತೆ ಪ್ರಕಾಶಮಾನವಾಗುತ್ತಿತ್ತು. ನಾನು ಅವರ ಕೋಣೆಯ ಪಕ್ಕದ ಕೋಣೆಯಲ್ಲಿ ಮಲಗುತ್ತಿದ್ದೆ. ಒಂದು ರಾತ್ರಿ ಎಚ್ಚರವಾದಾಗ ಎದ್ದು ನೋಡಿದೆ, ಸ್ವಾಮೀಜಿಯವರ ಕೋಣೆ ಪ್ರಕಾಶಮಾನವಾಗಿತ್ತು. ಕೆಲವೊಮ್ಮೆ ಅವರು ಗಂಭೀರ ರಾತ್ರಿಯಲ್ಲಿ ಪರಮ ತನ್ಮಯತೆಯಿಂದ ಭಜನೆಯನ್ನು ಹಾಡುತ್ತಿದ್ದರು. ಒಂದು ರಾತ್ರಿ ಅವರು '**ಮಾ ತ್ವಂ ಹಿ ತಾರಾ, ತುಮಿ ತ್ರಿಗುಣಧರಾ ಪರಾತ್ಪರಾ**' ಎಂಬ ಭಜನೆಯನ್ನು ಹಾಡುತ್ತಿದ್ದರು.''

## ಬೇಲೂರು ಮಠ, ೧೯೩೭

ಒಬ್ಬ ಸಂನ್ಯಾಸಿ ಸ್ವಾಮಿ ವಿಜ್ಞಾನಾನಂದಜಿಯವರನ್ನು ಕೇಳುತ್ತಾರೆ: ''ಮಹಾರಾಜ್, ತಮಗೆ ಈಗಲೂ ಸ್ವಾಮಿ ವಿವೇಕಾನಂದರು ಕಾಣಿಸುತ್ತಾರೆಯೆ?''

ಸ್ವಾಮಿ ವಿಜ್ಞಾನಾನಂದಜಿ ಹೇಳುತ್ತಾರೆ: ''ಅವರು ಇದ್ದಾರೆ. ಈಗಲೂ ನಾನು ಅವರನ್ನು ನೋಡುತ್ತಿದ್ದೇನೆ. ಅವರು ಈ ಎದುರುಗಡೆಯ ವರಾಂಡದಲ್ಲಿ ಓಡಾಡುತ್ತಿರುತ್ತಾರೆ. ಛಾವಣಿಯ ಮೇಲೆ ವಾಯುವಿಹಾರ ಮಾಡುತ್ತಿರುತ್ತಾರೆ. ತಮ್ಮ ಕೋಣೆಯಲ್ಲಿ ಭಜನೆಯನ್ನು ಹೇಳುತ್ತಿರುತ್ತಾರೆ. ಇನ್ನು ಬಹಳ ಕಡೆಯಲ್ಲಿ ಕಾಣಿಸುತ್ತಾರೆ. ಮೊದಮೊದಲು ನಾನು ಬೇಲೂರು ಮಠದಲ್ಲಿ ಸ್ವಾಮೀಜಿಯವರ ಕೋಣೆಯ ಪಕ್ಕದ ಚಿಕ್ಕ ಕೋಣೆಯಲ್ಲಿ ವಾಸಿಸುತ್ತಿದ್ದೆ. ಆಗ ನಾನು ಸಾಧ್ಯವಾದಷ್ಟು ವರಾಂಡದ ಕಡೆಯ ಬಾಗಿಲನ್ನು ತೆರೆಯುತ್ತಿರಲಿಲ್ಲ. ಏಕೆಂದರೆ ಸ್ವಾಮೀಜಿ ಅಲ್ಲಿ ಓಡಾಡುತ್ತಿರುತ್ತಾರೆ. ತಮ್ಮ ಭಾವದಲ್ಲಿ ಅವರು ಮಗ್ನರಾಗಿರುತ್ತಾರೆ. ಒಂದು ಘಟನೆ ನನಗೆ ಚೆನ್ನಾಗಿ ನೆನಪಿದೆ. ಅವರು ಬದುಕಿರುದ್ದಾಗ ಒಂದು ರಾತ್ರಿಯಿಡೀ ಅವರು '**ಆಮಾರ್ ಮಾ ತ್ವಂ ಹಿ ತಾರಾ**' ಎಂದು ಭಾವಾವೇಶಭರಿತರಾಗಿ ಹಾಡುತ್ತಾ ಶತಪಥ ಮಾಡುತ್ತಿದ್ದರು. ಸ್ವಾಮೀಜಿ ಈ ರೀತಿ ಭಾವಾವಿಷ್ಟರಾಗಿದ್ದಾಗ ಅವರ ಹತ್ತಿರ ಹೋಗುವ ಧೈರ್ಯ ಯಾರಿಗೂ ಇರುತ್ತಿರಲಿಲ್ಲ. ಅವರು ಹೆಚ್ಚಿನ ಸಂದರ್ಭದಲ್ಲಿ ಅದೊಂದೇ ಸಾಲನ್ನು ಹಾಡುತ್ತ ಸುತ್ತುತ್ತಿದ್ದರು. ಕೆಲವೊಮ್ಮೆ ಹಾಡುತ್ತ ಹಾಡುತ್ತ ಕಂಬನಿಗರೆಯುತ್ತಿದ್ದರು. ಇನ್ನು ಕೆಲವೊಮ್ಮೆ ಜಡವತ್ ಇರುತ್ತಿದ್ದರು. ಅವರ ಭಾವ ರಾತ್ರಿಯಿಡೀ ಮುಂದುವರಿಯುತ್ತಿತ್ತು.''

ಬೇಲೂರು ಮಠದಿಂದ ಅವರು ಅಲಹಾಬಾದಿಗೆ ಹೋಗುವ ದಿನ ತಾವು ಮಾಡುತ್ತಿರುವ ವಾಲ್ಮೀಕಿ ರಾಮಾಯಣದ ಅನುವಾದವನ್ನು ಕುರಿತಂತೆ ಹೇಳುತ್ತಾರೆ: ''ನಾನು ರಾಮಾಯಣವನ್ನು ಅನುವಾದಿಸುವಾಗ ಜಗತ್ತನ್ನು ಮರೆಯುತ್ತೇನೆ. ನನ್ನ ಮುಂದೆ ರಾಮ, ಲಕ್ಷ್ಮಣ, ಸೀತೆ ಮತ್ತು ಮಹಾವೀರರು ಪ್ರತ್ಯಕ್ಷರಾಗಿ ಬಿಡುತ್ತಾರೆ. ನನ್ನ ಉಳಿದ ಜೀವನವನ್ನು ರಾಮನಾಮದಲ್ಲೇ ಕಳೆಯುತ್ತೇನೆ.'' ಮುಂದೆ ಅದೇ ರೀತಿ ನಡೆಯಿತು. ತಮ್ಮ ಮಹಾಸಮಾಧಿಗೆ ೧೨ ದಿನ ಇರುವವರೆಗೂ ಅವರು ರಾಮಾಯಣದ ಅನುವಾದ ಕಾರ್ಯವನ್ನು ಮಾಡಿದ್ದರು.

ಸ್ವಾಮಿ ವಿಜ್ಞಾನಾನಂದರು ತಮ್ಮ ಆಧ್ಯಾತ್ಮಿಕ ಅನುಭವಗಳನ್ನು ಬಹಳ ಕಡಿಮೆ ಹೇಳಿದ್ದಾರೆ. ಅವರಿಗೆ ಆದ ಆಧ್ಯಾತ್ಮಿಕ ಅನುಭವಗಳಿಗೆ ಲೆಕ್ಕವೇ ಇಲ್ಲ. ಅವರು ಹೇಳಿರುವ ಈ ಕೆಲವು ಅನುಭವಗಳೇ ಆಧ್ಯಾತ್ಮಿಕ ಸಾಧನೆಯಲ್ಲಿ ನಾವು ದೃಢಚಿತ್ತರಾಗಿ ಮುನ್ನಡೆಯುವಂತೆ ಪ್ರಚೋದಿಸುತ್ತವೆ, ಆಧ್ಯಾತ್ಮಿಕ ಸಾಮ್ರಾಜ್ಯ ಎಷ್ಟು ಸತ್ಯವಾದುದು ಎಂಬುದನ್ನು ನಮಗೆ ತಿಳಿಯಪಡಿಸುತ್ತವೆ. ✷

# ಶ್ರೀ ತ್ಯಾಗರಾಜರ ಕೀರ್ತನೆಗಳಲ್ಲಿ ನವವಿಧ ಭಕ್ತಿ

**ಭಾಗ ೨**

**– ಶಶಿಕಲಾ ಶ್ರೀಧರ್**

*(ಹಿಂದಿನ ಸಂಚಿಕೆಯಿಂದ ಮುಂದುವರಿದಿದೆ)*

**೬. ವಂದನಂ :** ಭಗವಂತನಿಗೆ ಕಾಯಾ ವಾಚಾ ಮನಸಾ ಶ್ರದ್ಧೆಯಿಂದಲೂ, ಭಕ್ತಿಯಿಂದಲೂ ಅವನ ಮಹಿಮೆಯನ್ನು ಜ್ಞಾನಪೂರ್ವಕ ಸ್ಮರಿಸುತ್ತಾ, ಅಂತರಂಗದಲ್ಲಿ 'ಶ್ರೀಹರಿ, ನೀನೇ ಗತಿ' ಎಂಬ ಶರಣಾಗತಿ ಭಾವದಿಂದ ನಮಸ್ಕರಿಸುವುದೇ ವಂದನ ಭಕ್ತಿ.

**ವಂದನಮು ರಘುನಂದನ ಸೇತು**
**ಬಂಧನ ಭಕ್ತ ಚಂದನ ರಾಮ ॥**

**ಶ್ರೀದಮಾ ನಾತೋವಾದಮಾ ನೇ**
**ಭೇದಮಾ ಇದಿ ಮೋದಮಾ ರಾಮ ॥**

**ಶ್ರೀರಮಾಹೃಚ್ಚಾರಮಾ ಬ್ರೋವ**
**ಭಾರಮಾ ರಾಯಬಾರಮಾ ರಾಮ ॥**

**ವಿಂಟಿನಿ ನಮ್ಮುಕೊಂಟಿನಿ ಶರ**
**ಣಂಟಿನಿ ರಮ್ಮಂಟಿನಿ ರಾಮ ॥**

**ಓಡನು ಭಕ್ತಿವೀಡನು ನೊರುಲ**
**ವೇಡನು ನೀವಾಡನು ರಾಮ ॥**

**ಕಂಮನಿ ವಿಡೆಮಿಮ್ಮನಿ ವರಮು**
**ಕೊಮ್ಮನಿ ಪಲುಕ ರಮ್ಮನಿ ರಾಮಾ। ..**

**ವೇಗರಾ ಕರುಣಾಸಾಗರಾ ಶ್ರೀ**
**ತ್ಯಾಗರಾಜುನಿ ಹೃದಯಾಗಾರಾ ರಾಮ।**



ಇದು ಶ್ರೀತ್ಯಾಗರಾಜರ **ವಂದನಭಕ್ತಿ**ಗೆ ನಿದರ್ಶನವಾದ, ಶಬ್ದಾಲಂಕಾರಕ್ಕೂ ಪ್ರಸಿದ್ಧವಾದ ದಿವ್ಯನಾಮ ಕೀರ್ತನೆ. 'ಓ ರಘುನಂದನ, ಸಮುದ್ರಕ್ಕೆ ಸೇತುವೆ ಕಟ್ಟಿದವನೆ! ಭಕ್ತರ ಆಸೆಗಳನ್ನು ಈಡೇರಿಸುವ ಐಶ್ವರ್ಯದಾತ, ನಿನಗೆ ವಂದನೆ. ನಾನು ನಿನಗೆ ಅನ್ಯನೆ? ನಿನಗೆ ಇದರಿಂದ ಸಂತೋಷವೆ? ಇದು ರಾಯಭಾರ ಮಾಡುವ ವಿಷಯವೆ? ನಿನ್ನಲ್ಲಿ ಅಚಲವಾದ ಭಕ್ತಿಯನ್ನು ಇರಿಸಿ, ಶರಣಾಗಿ ನಿನ್ನ ದರ್ಶನವನ್ನು ಬೇಡುತ್ತಿದ್ದೇನೆ. ನನ್ನ ಬಳಿಗೆ ಬಂದು, ನನ್ನೊಂದಿಗೆ ಮಾತನಾಡಿ, ವರಗಳನ್ನು ಅನುಗ್ರಹಿಸು ಓ ಕರುಣಾ ಸಾಗರನೆ! ತ್ಯಾಗರಾಜನ ಹೃದಯ ನಿವಾಸಿಯೆ! ಬೇಗ ಬಾ' ಎಂದು ಭಕ್ತಿಯಿಂದ ವಂದಿಸಿ ಪ್ರಾರ್ಥಿಸುತ್ತಾರೆ.

'ದಂಡಮು ಪೆಟ್ಟೇನುರಾ' ಎಂಬ ಇನ್ನೊಂದು ಕೀರ್ತನೆಯಲ್ಲಿ ಶ್ರೀತ್ಯಾಗರಾಜರು, 'ಓ ಕೋದಂಡಪಾಣಿ, ಗರುಡವಾಹನ, ಸೂರ್ಯಚಂದ್ರಲೋಚನ, ಶೇಷಶಯನ, ಬ್ರಹ್ಮಾಂಡನಾಯಕ, ನಿನಗೆ ಸಾಷ್ಟಾಂಗ ಪ್ರಣಾಮಗಳು. ಹೆಸರು, ಕೀರ್ತಿ, ಪ್ರತಿಷ್ಠೆ, ಹೊಗಳಿಕೆಗಳು ನನಗೆ ಬೇಡ. ನನ್ನ ಕೈಹಿಡಿದು ಸರಿಯಾದ ಮಾರ್ಗದಲ್ಲಿ ನಡೆಸು' ಎಂದು ಪ್ರಾರ್ಥಿಸುತ್ತಾರೆ.

'ನಮೋ ನಮೋ ರಾಘವಾಯ ಅನಿಶಂ' ಎಂಬ ಸಂಸ್ಕೃತ ರಚನೆಯಲ್ಲಿ ತ್ಯಾಗರಾಜರು ಶ್ರೀರಾಮನ ಗುಣಾತಿಶಯಗಳನ್ನು ಕೀರ್ತಿಸುತ್ತಾ, 'ರಾಘವನಿಗೆ ಸದಾ ನಮಸ್ಕಾರ ಮಾಡುತ್ತೇನೆ. ದೀನ ಬಂಧುವೆ, ಸಕಲಲೋಕ ದಯಾಸಿಂಧುವೆ, ಆಶ್ರಿತರಕ್ಷಕನೆ, ನಿಜಭಕ್ತರಿಗೆ ಕಲ್ಪವೃಕ್ಷದಂತಿರುವವನೆ, ಬ್ರಹ್ಮರುದ್ರಾದಿಗಳ ಗುರುವೆ, ದಾನವಾರಿಯೆ, ಆಯುರಾರೋಗ್ಯದಾಯಕನೆ, ಶೇಷಶಾಯಿಯೆ, ಆನೆಯ ಸೊಂಡಿಲಿನಂತೆ ಬಾಹುಗಳುಳ್ಳವನೆ, ಬಾಣಗಳಿಂದ ದಾನವರನ್ನು ಗೆದ್ದವನೆ, ತ್ಯಾಗರಾಜನಿಂದ ಸೇವಿಸಲ್ಪಡುವವನೆ, ನಿನಗೆ ನಮೋ ನಮಃ' ಎಂಬುದಾಗಿ ವಂದನ ಭಕ್ತಿಯನ್ನು ಕೊಂಡಾಡಿದ್ದಾರೆ.

ಭಗವದ್ಗೀತೆಯಲ್ಲಿ ಶ್ರೀಕೃಷ್ಣನ ವಿಶ್ವರೂಪದರ್ಶನ ಪಡೆದ ಅರ್ಜುನನು ಕೃಷ್ಣನನ್ನು ಸ್ತುತಿಸಿದ ಪರಿಯನ್ನು ಇಲ್ಲಿ ಸ್ಮರಿಸೋಣ. 'ಪರಮಾತ್ಮನೇ, ನಿನಗೆ ಹಿಂದೆ, ಮುಂದೆ ಮತ್ತು ಎಲ್ಲ ಕಡೆಯಲ್ಲಿಯೂ ನಮಸ್ಕಾರ. ಅನಂತವೀರ್ಯನೆ, ನೀನು ಅಮಿತ ಪರಾಕ್ರಮನು. ನೀನು ಎಲ್ಲವನ್ನೂ ವ್ಯಾಪಿಸಿಕೊಂಡಿರುವುದರಿಂದ ಸರ್ವಸ್ವರೂಪನಾಗಿರುವೆ' ಎಂಬುದಾಗಿ ಸ್ತುತಿಸುತ್ತಾ ಅರ್ಜುನನು ಶ್ರೀಕೃಷ್ಣನಿಗೆ ಮತ್ತೆ ಮತ್ತೆ ನಮಸ್ಕರಿಸುತ್ತಾನೆ.

ಆದ್ದರಿಂದ ಈ ಪ್ರಾಕೃತ ದೇಹವನ್ನಿತ್ತ ಅಪ್ರಾಕೃತ ಪರಮಾತ್ಮನ ದಿವ್ಯಮಂಗಳ ವಿಗ್ರಹವನ್ನು ವಂದಿಸುವವರೇ ಧನ್ಯರು.

**೭. ದಾಸ್ಯಂ :** ಪರಮಾತ್ಮ ಸ್ವಾಮಿ, ನಾನು ಅವನ ಸೇವಕ ಎಂಬ ಭಾವದಿಂದ ಅವನನ್ನು ಆರಾಧಿಸುವುದೇ **ದಾಸ್ಯಭಕ್ತಿ**. ಸೇವಕನಿಗೆ ಯಾವುದರಲ್ಲೂ ಸ್ವಾತಂತ್ರ್ಯವಿರುವುದಿಲ್ಲ. ಎಲ್ಲವೂ ಸ್ವಾಮಿಯ ಆಜ್ಞಾನುಸಾರವೇ ನಡೆಯಬೇಕು. ಭಗವಂತನ ಅಪಾರ ಶಕ್ತಿಯನ್ನರಿತು, ಸಹಜವಾಗಿಯೇ ಆ ಮಹಾಶಕ್ತ ಪ್ರಭುವಿಗೆ ತಾನು ಭೃತ್ಯನಾಗಿ ಸೇವೆ ಸಲ್ಲಿಸಲು ದಾಸ್ಯಭಕ್ತಿಯ ಸಾಧಕನು ತವಕಪಡುತ್ತಾನೆ. ಸ್ವಾಮಿಯ ಭೃತ್ಯನಾದ ಮೇಲೆ ಅವನಿಗೆ ಸದಾ ಸಾಮೀಪ್ಯ ಲಾಭ

ವಿರುತ್ತದೆ. ತನ್ನ ಈ ದಾಸನ ಯೋಗಕ್ಷೇಮ ಆ ದೇವದೇವನ ಹೊಣೆ. ಸೇವಕ ನಿಶ್ಚಿಂತ!



**ತವದಾಸೋಹಂ ತವದಾಸೋಹಂ**
**ತವ ದಾಸೋಹಂ ದಾಶರಥೇ।।**

**ವರಮೃದುಭಾಷ ವಿರಹಿತ ದೋಷ**
**ನರವರವೇಷ ದಾಶರಥೇ।।**

**ಸರಸಿಜನೇತ್ರ ಪರಮಪವಿತ್ರ**
**ಸುರಪತಿ ಮಿತ್ರ ದಾಶರಥೇ।।**

**ನಿನುಕೋರಿತಿರಾ ನಿರುಪಮಶೂರ**
**ನನ್ನೇಲು ಕೋರಾ ದಾಶರಥೇ।।**

**ಮನವಿನಿ ವಿನುಮಾ ಮರವ ಸಮಯಮಾ**
**ಇನಕುಲ ಧನಮಾ ದಶರಥೇ।।**

**ಘನ ಸಮನೀಲ ಮುನಿಜನಪಾಲ**
**ಕನಕದುಕೂಲ ದಾಶರಥೇ।।**

**ಧರ ನೀವಂಟಿ ದೈವಮು ಲೇದಂಟಿ**
**ಶರಣನು ಕೊಂಟಿ ದಾಶರಥೇ।।**

**ಆಗಮ ವಿನುತ ರಾಗವಿರಹಿತ**
**ತ್ಯಾಗರಾಜನುತ ದಾಶರಥೇ।।**

'ದಶರಥಪುತ್ರನಾದ ಶ್ರೀರಾಮ! ನಿನ್ನ ದಾಸ ನಾನು. ಮೃದುಭಾಷನೆ, ದೋಷರಹಿತನೆ, ನರವರನೆ, ಸರಸಿಜನೇತ್ರನೆ, ಪರಮ ಪವಿತ್ರನೆ, ಇಂದ್ರನ ಮಿತ್ರನೆ, ನಿರುಪಮ ಶೂರನೆ, ನೀಲಮೇಘ ಶ್ಯಾಮನೆ, ಮುನಿಜನಪಾಲನೆ, ಚಿನ್ನದ ಉಡುಗೆ ಉಟ್ಟವನೆ, ನಿನಗೆ ಸರಿಸಾಟಿಯಾದ ದೈವವು ಯಾರೂ ಇಲ್ಲವೆಂದು ನಿನ್ನಲ್ಲಿ ಶರಣು ಹೋಗಿದ್ದೇನೆ. ನನ್ನ ಮೊರೆಯನ್ನು ಕೇಳು. ನನ್ನನ್ನು ಮರೆತುಬಿಡುವ ಸಮಯ ಇದಲ್ಲ. ನಿನ್ನ ದಾಸನಾದ ನನ್ನನ್ನು ಕಾಪಾಡು' ಎಂಬುದಾಗಿ ಶ್ರೀತ್ಯಾಗರಾಜರು ಶ್ರೀರಾಮನಲ್ಲಿ ದಾಸ್ಯಭಕ್ತಿಯನ್ನು ಈ ದಿವ್ಯನಾಮ ಕೀರ್ತನೆಯಲ್ಲಿ ಬೆಳಗುತ್ತಾ ಪ್ರಾರ್ಥಿಸಿದ್ದಾರೆ.

'ಬಂಟು ರೀತಿ ಕೋಲು' ಕೃತಿಯಲ್ಲಿ ಶ್ರೀರಾಮನ ದರ್ಬಾರಿನಲ್ಲಿ ರಾಮ ಬಂಟನಾಗಿ ಸೇವೆ ಸಲ್ಲಿಸುವ ಭಾಗ್ಯವನ್ನು ಕರುಣಿಸಲು ತ್ಯಾಗರಾಜರು ಪ್ರಾರ್ಥಿಸುತ್ತಾರೆ. ಶ್ರೀರಾಮನ ಸ್ಮರಣೆಯಲ್ಲಿ ರೋಮಾಂಚನಗೊಳ್ಳುವುದೇ ಕವಚ, ರಾಮಭಕ್ತ ಎಂಬುದೇ ಅಧಿಕಾರದ ಮುದ್ರೆ, ರಾಮನಾಮವೇ ಖಡ್ಗ. ನಿರಂತರ ಸೇವೆಯಲ್ಲೇ ಕಾಮಕ್ರೋಧಾದಿಗಳು ನಶಿಸಿ, ರಾಮನಲ್ಲಿ ನಿಜದಾಸನಾಗುವ ಮನೋಭಿಲಾಷೆಯನ್ನು ಇಲ್ಲಿ ಭಕ್ತಿತುಂಬಿ ಪ್ರಾರ್ಥಿಸುತ್ತಾರೆ.

'ಉಪಚಾರಮು ಚೇಸೇವಾರು' ಎಂಬ ಇನ್ನೊಂದು ಕೀರ್ತನೆಯಲ್ಲಿ ಶ್ರೀರಾಮನ ಸೇವೆ ಮಾಡಲು ಹನುಮ, ಲಕ್ಷ್ಮಣ, ಸೀತೆ ಇವರೆಲ್ಲರೂ ಇರುವಾಗ ಇತರರು ಏಕೆ ಎಂದು ತಮ್ಮನ್ನು ಕಡೆಗಣಿಸದೆ, ತಮ್ಮ ಸೇವೆಯನ್ನು ಸ್ವೀಕರಿಸಿ ಅನುಗ್ರಹಿಸಲು ಪ್ರಾರ್ಥಿಸುತ್ತಾರೆ.

'ಚೆಂತನೇ ಸದಾ' ಎಂದು ಹಾಡುತ್ತಾ, 'ಓ ರಾಮಾ! ಪ್ರಖ್ಯಾತನಾದ ಹನುಮಂತ ಮತ್ತು ಭರತನಿಗೆ ಅನುಗ್ರಹಿಸಿದಂತೆ ಸದಾ ನಿನ್ನ ಸಾಮೀಪ್ಯವನ್ನು ಅನುಗ್ರಹಿಸು. ನಿನ್ನ ಇಂಗಿತವನ್ನರಿತು ಅದರಂತೆ ಕೈಂಕರ್ಯ ಮಾಡುತ್ತೇನೆ. ನೀನು ಅವುಗಳನ್ನು ಪುನಃ ಪುನಃ ಹೇಳುವ ಆವಶ್ಯಕತೆ ಬರುವುದಿಲ್ಲ' ಎಂದು ಪ್ರಾರ್ಥಿಸುತ್ತಾರೆ ಶ್ರೀತ್ಯಾಗರಾಜರು.

**೮. ಸಖ್ಯಂ :** ಭಗವಂತನ ಮಹಿಮೆ ಮತ್ತು ತತ್ತ್ವ ರಹಸ್ಯಗಳನ್ನು ತಿಳಿದುಕೊಂಡು, ಪರಮ ವಿಶ್ವಾಸದಿಂದ ಅವನನ್ನು ಮಿತ್ರಭಾವದಿಂದ ಆರಾಧಿಸಿ ಅವನ ಇಚ್ಛೆಗನುಸಾರವಾಗಿ ನಡೆದುಕೊಳ್ಳುತ್ತಾ, ಅವನಲ್ಲಿ ಅನನ್ಯಪ್ರೇಮವಿಟ್ಟು ಪ್ರಸನ್ನ ಚಿತ್ತದಿಂದಿರುವುದು **ಸಖ್ಯ ಭಕ್ತಿ.** ಆ ಪರಮಮಿತ್ರನ ಸ್ಪರ್ಶ, ಸಂದರ್ಶನ, ಸಂಭಾಷಣಗಳಿಗಾಗಿ ಕಾತರಗೊಳ್ಳುತ್ತಾ ಅವನ ವಿಯೋಗದಲ್ಲಿ ವ್ಯಾಕುಲ



ಗೊಳ್ಳುತ್ತಾ ಹಗಲೂ ಇರುಳೂ ಅವನ ಪ್ರತೀಕ್ಷೆಯಲ್ಲೇ ಇರುತ್ತಾನೆ ಸಖ್ಯ ಭಕ್ತ!

ನಾದಯೋಗಿ ತ್ಯಾಗರಾಜರು ತಮ್ಮ ಅನೇಕ ಕೃತಿಗಳಲ್ಲಿ ಶ್ರೀರಾಮನನ್ನು ತಮ್ಮ ಪರಮಸಖನಾಗಿ ಕಂಡು ಸ್ನೇಹದಿಂದ ಪ್ರಾರ್ಥಿಸುವ ಪರಿ ಅತಿಸುಂದರ!

**ಸಾಮಿಕಿ ಸರಿ ಜೆಪ್ಪ ಜಾಲ ವೇಲ್ಪುಲ ರಾಮಾ ।**

**ನಾ ಮನಸ ನತನಿಪ್ಪೈ ನಾಟಿ ಯುಂಡಗ ನೊರುಲ ॥**

**ಏಟಿ ಯೋಚನ ಚಾಲು ನೆವ್ವರಿ ಕೆಟುಲೋ ವ್ರಾಲು**
**ಮಾಟಲಾಡುಟಮೇಲು ಮದಿ ಕಿದೆ ಪದಿವೇಲು॥**

**ತನಕಂಟಿ ಕೆಂತೋ ಮುದ್ದು ತಪ್ಪ ದಾಟಿನ ಪದ್ದು**
**ಚನುವುಜೇಯುನೇಪ್ರದ್ದು ಚಲ್ಲನಿ ಜೂಪು ಕದ್ದು॥**

**ಅನ್ನಿ ವೇಲ್ಪುಲ ಲೋನ ನತನಿ ಸರಿಗಾನ**
**ತನ್ನು ಬ್ರೋ್ೇಚಿನ ಘನತ್ಯಾಗರಾಜ ಸಖುಡೈನ॥**

'ನನ್ನ ಮಿತ್ರನೂ ರಕ್ಷಕನೂ ಆದ ಶ್ರೀರಾಮನಲ್ಲಿ ನನ್ನ ಮನಸ್ಸು ಇರುವಾಗ ಇತರ ದೈವಗಳು ಅವನಿಗೆ ಸಮಾನರೆಂದು ನಾನು ಭಾವಿಸುವುದಿಲ್ಲ. ಚಿಂತಿಸಬೇಕಾದ ಪ್ರಮೇಯವೇ ಇಲ್ಲ. ಪ್ರತಿಯೊಬ್ಬನಿಗೂ ಲಭ್ಯವಿದ್ದಷ್ಟು ದೊರಕುತ್ತದೆ. ಆ ನನ್ನ ಸ್ವಾಮಿಯು ನನ್ನನ್ನು ಮಾತನಾಡಿಸಿದರೆ ಅದೇ ನನ್ನ ಭಾಗ್ಯ! ನನ್ನ ಕಣ್ಣಿಗೆ ಅವನೇ ಸಕಲ ಸೌಂದರ್ಯ. ಅವನು ನನ್ನನ್ನು ವಾತ್ಸಲ್ಯದಿಂದ ಕಾಣುತ್ತಾನೆ. ಅವನು ಯಾವಾಗಲೂ ಶಾಂತ ದೃಷ್ಟಿಯುಳ್ಳವನು.'

'ಇನ್ನಾಳು ನನ್ನೇಲಿ' ಎಂಬ ಇನ್ನೊಂದು ಕೃತಿಯಲ್ಲಿ ಶ್ರೀ ತ್ಯಾಗರಾಜರು, 'ನನ್ನ ಸೌಭಾಗ್ಯನಿಧಿಯಾದ ವನಮಾಲಿ! ಇಲ್ಲಿಯವರೆಗೂ ನನ್ನನ್ನು ರಕ್ಷಿಸಿ ಈಗೇಕೆ ಈ ಪ್ರಹಸನ? ಬಾಲಕನಂತಿರುವ ನನ್ನ ಪರಿತಾಪವನ್ನು ನೋಡಿ, ತಾಳುತಾಳೆಂದು ಧೈರ್ಯವಿತ್ತು, ನನ್ನ ಸ್ವಭಾವವನ್ನರಿತು, ನನ್ನ ನಿರಾಸೆಯನ್ನು ಹೋಗಲಾಡಿಸಿ ಸಂತೋಷಪಡಿಸಲು ಪ್ರೀತಿಯ ಕುಡಿನೋಟವನ್ನು ಬೀರಿ, ಆಟವಾಡಿ, ನನ್ನೊಡನೆ ಸದಾ ಇರುವುದಾಗಿ ಮಾತುಕೊಟ್ಟು, ಈಗ ಎಲ್ಲಿಗೆ ಹೋಗಿರುವೆ?' ಎನ್ನುತ್ತಾರೆ.

'ನೀನು ಸತ್ಯಸಂಧನೇ ಆಗಿದ್ದರೆ ನನ್ನನ್ನು ರಕ್ಷಿಸಿ ಸಂತೋಷಪಡಿಸು. ನಾನು ಲಘುವಾಗಿ ನಿನ್ನನ್ನು ಪ್ರಾರ್ಥಿಸಿಲ್ಲ. ನಿನ್ನನ್ನು ಕಷ್ಟದಲ್ಲಿ ಒದಗುವ ಮಿತ್ರನೆಂದು, ಯಾವಾಗಲೂ ಅಸಮಾನ ಸಂಗಾತಿ ಎಂದು ನಾನು ತಿಳಿದಿರುವೆನು.

'ಒಂದು ಸಲ ರಕ್ಷಕನಾಗಿ, ಇನ್ನೊಂದು ಸಲ ಕಿರುಕುಳ ಕೊಡುವವನಾಗಿ, ಮತ್ತೊಂದು ಸಲ ಸಂಬಂಧವಿಲ್ಲದೆ ವೀಕ್ಷಕನಂತೆ ನಾನಾ ರೀತಿ ಕಾಣಿಸಿಕೊಳ್ಳುವುದು ನಿನಗೆ ಸರಿಯಲ್ಲ. ಆಪದ್ಬಾಂಧವನೆ, ಕಳಂಕರಹಿತನೆ, ತ್ಯಾಗರಾಜನಿಂದ ಪೂಜಿಸಲ್ಪಟ್ಟ ಚರಣಗಳುಳ್ಳವನೆ! ನಿನಗೆ ಕಿಂಚಿತ್ತಾದರೂ ದಯೆ ಇಲ್ಲವೆ?' ಎಂದು ಪ್ರಾರ್ಥಿಸುತ್ತಾರೆ.

ತ್ಯಾಗರಾಜರು ತಮ್ಮ ಕೃತಿಗಳಲ್ಲಿ ಶ್ರೀರಾಮನು ತಮ್ಮ ಸರಿಸಾಟಿಯಿಲ್ಲದ ಜೊತೆಗಾರನೆಂದು ನಂಬಿ ಅವನನ್ನು 'ವರಮಿತ್ರ', 'ತ್ಯಾಗರಾಜಸಖುಡು', 'ತ್ಯಾಗರಾಜುನಿಮಿತ್ರ', ಎಂದು ಸಂಬೋಧಿಸುತ್ತಾ, ಅವನೊಡನೆ ಅತ್ಯಂತ ಸ್ನೇಹದಿಂದ, 'ನನ್ನನ್ನು ರಕ್ಷಿಸಿ ನಿನ್ನ ಕುಲಬಿರುದುಗಳನ್ನು ಉಳಿಸಿಕೋ' ಎಂದು ಸಲಿಗೆಯಿಂದಲೂ ರಾಮನಲ್ಲಿನ ಸ್ನೇಹವಿಶೇಷದಿಂದಲೂ ಅವನನ್ನು ರೇಗಿಸುತ್ತಾರೆ, ಒಮ್ಮೊಮ್ಮೆ ಕೋಪಿಸಿಕೊಳ್ಳುತ್ತಾರೆ, ಹಾಸ್ಯ ಮಾಡುತ್ತಾರೆ, ಹಟ ಸಾಧಿಸುತ್ತಾರೆ, ಜಗಳವಾಡುತ್ತಾರೆ. ಅವನಿಗೇ ಬುದ್ಧಿ ಹೇಳುತ್ತಾರೆ, ಕೊನೆಗೆ ತಾವೇ ಅವನೊಡನೆ ಹೃದಯ ಬಿಚ್ಚಿ ಮಾತನಾಡಿ, ರಾಜಿ ಮಾಡಿಕೊಳ್ಳುತ್ತಾರೆ. ಆ ಪರಮಸಖನಿಂದ ಈ ಭಕ್ತನಿಗೆ ಸಿಗುವ ಫಲ ಅಪಾರ!

**೯. ಆತ್ಮನಿವೇದನಂ :** ಯಾವುದರಲ್ಲೂ ತನ್ನತನವಿಲ್ಲದೆ ಪರಮಾತ್ಮ ಕರುಣಿಸಿದುದನ್ನು ಅವನಿಗೇ ಅರ್ಪಿಸಿ, ತಾನು ಸ್ವರೂಪಾನಂದದಲ್ಲಿ ರತನಾಗಿ ನಿಶ್ಚಿಂತೆಯಿಂದಿರುವುದೇ **ಆತ್ಮನಿವೇದನ ಭಕ್ತಿ**. ಎಲ್ಲವೂ ಶ್ರೀರಾಮನಿಚ್ಛೆ, ತನ್ನದೆಂಬುದೇನೂ ಇಲ್ಲ ಎಂಬ ಗಾಢಭಕ್ತಿಯಿಂದ ತಾನು ಜೀವ, ಪರತಂತ್ರ; ಪರಮಾತ್ಮ ಸರ್ವತಂತ್ರ ಸ್ವತಂತ್ರ; ತಾನು ಸಂಪೂರ್ಣವಾಗಿ ಅವನ ಅಧೀನ – ಎಂಬ ಭಾವದಿಂದ ನಿರಾತಂಕದಿಂದಿರುತ್ತಾನೆ ಈ ಭಕ್ತ.



ಗಾನಯೋಗಿ ತ್ಯಾಗರಾಜರು ತಮ್ಮ ಅನೇಕ ಕೃತಿಗಳಲ್ಲಿ ಪರಮಾತ್ಮನಲ್ಲಿ ಸಂಪೂರ್ಣ ಶರಣಾಗತಿಯನ್ನು ಕೀರ್ತಿಸುತ್ತಾ ತಮ್ಮ ಸರ್ವಸ್ವವನ್ನೂ ಶ್ರೀರಾಮನಿಗೆ ಸಮರ್ಪಿಸುತ್ತಾರೆ. ತನ್ನತನವನ್ನು ಕಳೆದುಕೊಂಡು ಅವನಲ್ಲೇ ಒಂದಾಗುವ ಭಾಗ್ಯವನ್ನು ಪಡೆಯುತ್ತಾರೆ.

**ಮಾಕೇಲರಾ ವಿಚಾರಮು**

**ಮರುಗನ್ನ ಶ್ರೀರಾಮಚಂದ್ರ ।**

**ಸಾಕೇತ ರಾಜಕುಮಾರ। ಸದ್ಭಕ್ತ ಮಂದಾರ । ಶ್ರೀಕರ ।**

**ಜತ ಗೂರ್ಚಿ ನಾಟಕ ಸೂತ್ರಮುನು**
**ಜಗಮೆಲ್ಲ ಮೆಚ್ಚಗ ಕರಮುನ ನಿಡಿ।**
**ಗತಿ ತಪ್ಪಕ ಯಾಡಿಂಚೇದವು ಸುಮೀ**
**ನತ ತ್ಯಾಗರಾಜ ಗಿರೀಶ ವಿನುತ ॥**

'ಶ್ರೀರಾಮಚಂದ್ರ! ಮನ್ಮಥನಿಗಿಂತಲೂ ಸುಂದರರೂಪವುಳ್ಳವನೆ, ನಿನಗೇತಕೆ ಚಿಂತೆ? ಅಯೋಧ್ಯೆಯ ರಾಜಕುಮಾರನೆ, ಯೋಗ್ಯ ಭಕ್ತರಿಗೆ ಕಲ್ಪವೃಕ್ಷದಂತಿರುವವನೆ, ಸಂಪತ್ತನ್ನು ಉಂಟುಮಾಡುವವನೆ! ಜಗನ್ನಾಟಕ ಸೂತ್ರವನ್ನು ಜಗತ್ತೆಲ್ಲ ಮೆಚ್ಚುವಂತೆ

ಕೈಯಲ್ಲಿ ಹಿಡಿದು, ಗತಿ ತಪ್ಪದೆ ತ್ಯಾಗರಾಜನಿಂದ ನಮಸ್ಕರಿಸಲ್ಪಡುವವನೆ, ಕೈಲಾಸಪತಿ ಶಿವನಿಂದ ಸ್ತುತಿಸಲ್ಪಡುವವನೆ, ನೀನು ಆಡಿಸುತ್ತೀಯೆ, ನನಗೇಕೆ ಚಿಂತೆ?' ಎಂಬುದಾಗಿ ಆತ್ಮನಿವೇದನ ಭಕ್ತಿಯನ್ನು ಪ್ರಕಟಿಸುತ್ತಾರೆ.

'ಕಾಲಹರಣಮೇಲರಾ' ಎಂಬ ಕೀರ್ತನೆಯಲ್ಲಿ ಶ್ರೀತ್ಯಾಗರಾಜರು, 'ಓ ಸೀತಾರಾಮ! ನನ್ನನ್ನು ಅನುಗ್ರಹಿಸಲು ಇನ್ನು ಏಕೆ ಕಾಲವಿಳಂಬ ಮಾಡುತ್ತಿರುವೆ? ಪಕ್ಷಿಗಳು ಆಕಾಶದಲ್ಲಿ ಸುತ್ತಿ ಸುತ್ತಿ ಹಾರುತ್ತ, ಕೊನೆಗೆ ಮರವನ್ನು ಆಶ್ರಯಿಸಿ ವಿಶ್ರಾಂತಿ ಪಡೆಯುವಂತೆ, ನಾನು ನಿನ್ನನ್ನು ಅರಸುತ್ತಾ ಕೊನೆಗೆ ನಿನ್ನ ಪಾದಗಳಲ್ಲಿ ವಿಶ್ರಾಂತಿ ಪಡೆಯುತ್ತೇನೆ. ಎಲ್ಲಡೆ ಸುತ್ತಾಡಿ ಎಲ್ಲೂ ಆಶ್ರಯ ಸಿಗದೆ ನೀನೇ ನನ್ನ ಸರ್ವಸ್ವವೆಂದು ಕಾಯಾವಾಚಾ ಮನಸಾ ಆತ್ಮ ಸಮರ್ಪಣೆ ಮಾಡಿಕೊಂಡಿದ್ದೇನೆ' ಎಂದು ಪ್ರಾರ್ಥಿಸುತ್ತಾರೆ.

'ಅಪರಾಧಮುಲ' ಕೃತಿಯಲ್ಲಿ ತಮ್ಮ ಅಪರಾಧಗಳನ್ನೆಲ್ಲ ಮನ್ನಿಸಿ ಕೃಪೆ ಮಾಡಿದರೆ ಶ್ರೀರಾಮನ ಕೀರ್ತಿಯೇ ಹೆಚ್ಚುವುದೆಂದು ಪ್ರಾರ್ಥಿಸುತ್ತಾ, ರಾಮನ ದರ್ಶನವಿಲ್ಲದೆ ಇನ್ನು ಸಹಿಸಲು ಸಾಧ್ಯವೇ ಇಲ್ಲವೆಂದೂ, ಶರಣಾಗಿ ಬಂದಿರುವ ತಮ್ಮ ಮೇಲೆ ಕೃಪೆ ತೋರಬೇಕೆಂದೂ ದೈನ್ಯದಿಂದ ಪ್ರಾರ್ಥಿಸುತ್ತಾರೆ.

'ನೀ ಚಿತ್ತಮು ನಾಭಾಗ್ಯವಯ್ಯ' ಎಂದು ಹಾಡುತ್ತಾ 'ಸ್ವಾಮಿ, ನೀನೇ ನನ್ನ ಭಾಗ್ಯ, ನಾನು ನಿನ್ನವನು ಸುಮ್ಮನೆ ಚಿಂತಿಸುವುದು ನಿಷ್ಪ್ರಯೋಜಕವೆಂದು ತಿಳಿದು ನಿನ್ನಲ್ಲಿ ಸಂಪೂರ್ಣ ಶರಣಾಗಿದ್ದೇನೆ. ಎಲ್ಲ ದೇವದೇವಿಯರಲ್ಲೂ ನಾನು ನಿನ್ನನ್ನೇ ಕಾಣುತ್ತೇನೆ' ಎಂದು ಭಗವಂತ ಸರ್ವಾಂತರ್ಯಾಮಿಯಾಗಿರುವುದರಿಂದ, ಸರ್ವಾಶ್ರಯನಾದ ಅವನಲ್ಲೇ ಸಂಪೂರ್ಣವಾಗಿ ಶರಣಾಗುತ್ತಾರೆ ಶ್ರೀ ತ್ಯಾಗರಾಜರು.

ಇವು ನವರಸನಾಯಕನಿಗೆ ತ್ಯಾಗರಾಜರು ನವವಿಧ ಭಕ್ತಿ ರೂಪಗಳಲ್ಲೂ ರಚಿಸಿ ಹಾಡಿದ ಸುಂದರ ಸುಮಧುರ ಕೀರ್ತನೆಗಳು. ಇವರ ಭಕ್ತಿಭರಿತ, ವೈವಿಧ್ಯಮಯ ಸುಂದರ ಕೀರ್ತನೆಗಳಲ್ಲಿ ಒಮ್ಮೆ ದಾಸನಾಗಿ, ಒಮ್ಮೆ ಸಖನಾಗಿ ಒಮ್ಮೆ ದೈನ್ಯದಿಂದ, ಒಮ್ಮೆ ರೋಷದಿಂದ ಕಡೆಗೆ ಸಂಪೂರ್ಣವಾಗಿ ಶರಣಾಗಿ ಪ್ರಾರ್ಥಿಸಿದ್ದಾರೆ. ಈ ಎಲ್ಲ ಕೃತಿಗಳನ್ನೂ ಅವರು ಮಧುರ ಮನೋಹರ ರಾಗಗಳಲ್ಲಿ ಅಳವಡಿಸಿ ಹಾಡಿದ್ದಾರೆ. ಸಾಮಾನ್ಯ ಪುಷ್ಪಗಳಿಂದ ರಚಿಸುವ ಪುಷ್ಪ ಮಾಲೆಗಿಂತ ಅತಿ ಹೆಚ್ಚಿನದಾದ, ಅನನ್ಯ ಸಾಧಾರಣವಾದ **ಶತ ರಾಗಕೃತಿರತ್ನಮಾಲಿಕೆ**ಯನ್ನು ಶ್ರೀರಾಮನಿಗೆ ಅರ್ಪಿಸಿ, ರಾಮಭಕ್ತಿ ಸಾಮ್ರಾಜ್ಯವನ್ನೇ ಸ್ಥಾಪಿಸಿದ್ದಾರೆ. ತ್ಯಾಗರಾಜರ ಜೀವನವು ಶ್ರೀರಾಮನಲ್ಲಿ ಅಸಾಧಾರಣ ಭಕ್ತಿ, ಭಕ್ತಿಭರಿತ ಮೋಕ್ಷದಾಯಕ ಕೀರ್ತನೆಗಳ ರಚನೆ ಹಾಗೂ ರಾಗಜ್ಞಾನವನ್ನು ಪಡೆದು ಹಾಡಿದ ಮಧುರ ರಾಗಗಳ ಗಾಯನ – ಈ ಮೂರರ ತ್ರಿವೇಣಿ ಸಂಗಮವಾಗಿದೆ! ಸದ್ಭಕ್ತಿ ಸಹಿತ ಸಂಗೀತಜ್ಞಾನದಿಂದ ಕೂಡಿದ ನಾಮೋಪಾಸನೆಯು ಮೋಕ್ಷಫಲವನ್ನು ಕರುಣಿಸುವುದು ಸತ್ಯ ಎನ್ನುತ್ತಾರೆ ಶ್ರೀ ತ್ಯಾಗರಾಜರು.

ಹೀಗೆ ವಿಭೂತಿಪುರುಷರೆನಿಸಿದ ತ್ಯಾಗರಾಜರು ತಮ್ಮ ಗಾಯನ, ಗೇಯನಾಟಕಗಳಲ್ಲಿ ವ್ಯಾಸರಂತೆ ವೇದವೇದಾಂತಗಳ ರಹಸ್ಯಗಳನ್ನು ವ್ಯಕ್ತಪಡಿಸಿದ್ದಾರೆ, ಮಹರ್ಷಿ ವಾಲ್ಮೀಕಿಗಳಂತೆ ಮೃದು ಮಧುರ ಮಾತುಗಳನ್ನು ಉಪಯೋಗಿಸಿದ್ದಾರೆ. ಶುಕ ಋಷಿಯಂತೆ ವೈರಾಗ್ಯಶೀಲರೂ, ಪ್ರಹ್ಲಾದನಂತೆ ಪರಮಭಕ್ತಿಯುಳ್ಳವರೂ, ದೇವರ್ಷಿ ನಾರದರಂತೆ ಸಂಗೀತಲೋಲರೂ ಆಗಿ ಅಮರರಾಗಿದ್ದಾರೆ. ತಮ್ಮ ದಿವ್ಯ ಕೃತಿಗಳಿಂದ ಜನಸಾಮಾನ್ಯರನ್ನೂ ಮಾನವತ್ವದಿಂದ ದೈವತ್ವಕ್ಕೊಯ್ಯಲು ಸಮರ್ಥರಾಗಿದ್ದಾರೆ. ಇಂತಹ ನಾದಯೋಗಿಗೆ ನಮ್ಮ ಭಕ್ತಿ ನಮನಗಳು. ✷

*ಗ್ರಂಥಋಣ:*


೧. ಶ್ರೀತ್ಯಾಗರಾಜ ಕೃತಿಮಂಜರಿ – *ಡಾ. ವಿ.ಎಸ್. ಸಂಪತ್ಕುಮಾರಾಚಾರ್ಯ*

೨. The Spiritual Heritage of Tygaraja – *C. Ramanujachari*


## ಸೇವೆಯಿಂದ ಸಾರ್ಥಕತೆ

ಸಮಾಜಸೇವಕ, ಮಾನವಸೇವಕ ಭಾಸ್ಕರರಾವ್ ಕೇರಳದ ಸಮುದ್ರದಡದಲ್ಲಿರುವ ವನವಾಸಿಗಳ, ಬೆಸ್ತರ ಸೇವೆಯಲ್ಲಿ ತಮ್ಮ ಜೀವನವನ್ನು ಸಮರ್ಪಿಸಿಕೊಂಡಿದ್ದರು. ಅವರು ಒಂದು ಸಣ್ಣ ಗುಡಿಸಿಲಿನಲ್ಲಿ ವಾಸಿಸುತ್ತಿದ್ದರು. ಬೆಸ್ತರ ಸಮಸ್ಯೆಗಳನ್ನು ತಾವೇ ಪತ್ತೆಹಚ್ಚಿ ಅವುಗಳ ಪರಿಹಾರಕ್ಕಾಗಿ ಹಗಲು–ರಾತ್ರಿ ಪರಿಶ್ರಮಿಸುತ್ತಿದ್ದರು. ಆ ಮುಗ್ಧ ಬಡ ಸ್ತ್ರೀ–ಪುರುಷರನ್ನು ಒಂದುಕಡೆ ಸೇರಿಸಿ ರಾಮಚರಿತಮಾನಸ ಹಾಗೂ ಇತರ ಧರ್ಮಗ್ರಂಥಗಳ ಕಥೆಗಳನ್ನು ವಿವರಿಸಿ ಹೇಳುತ್ತಿದ್ದರು. ಅವರು ಆ ಹಳ್ಳಿಗರನ್ನು ಮದ್ಯ, ಜೂಜು, ಧೂಮಪಾನ ಹಾಗೂ ಇತರ ದುರ್ವ್ಯಸನಗಳಿಂದ ದೂರವಿರಿಸಿದ್ದರು. ಮಕ್ಕಳಿಗೆ ಶಿಕ್ಷಣ ನೀಡುತ್ತಿದ್ದರು, ಜನರಿಗೆ ಸ್ವಚ್ಛತೆಯ ಹಾಗೂ ಸಭ್ಯತೆಯ ಪಾಠಗಳನ್ನು ಕಲಿಸಿಕೊಡುತ್ತಿದ್ದರು. ಭಾಸ್ಕರರಾವ್ ಆ ಹಳ್ಳಿಯ ಜನರನ್ನು ಮೇಲೆತ್ತಲು '**ವನವಾಸಿ ಕಲ್ಯಾಣ ಸೇವಾ ಆಶ್ರಮ**' ವನ್ನು ಆರಂಭಿಸಿದರು.

ಶ್ರೀಕೃಷ್ಣ ಜನ್ಮಾಷ್ಟಮಿಯ ದಿನದಂದು ಒಬ್ಬ ವೃದ್ಧೆಗೆ ಕಾಲರಾ ಆಗಿತ್ತು. ಭಾಸ್ಕರರಾವ್ ಇಪ್ಪತ್ನಾಲ್ಕು ಗಂಟೆ ಅವಳ ಸೇವೆಯಲ್ಲಿ ಮುಳುಗಿದರು. ಒಬ್ಬ ಶಿಷ್ಯ ಬಂದು ಹೇಳಿದ, ''ಅಣ್ಣ, ಇವತ್ತು ಶ್ರೀಕೃಷ್ಣನ ಉತ್ಸವ ಇದೆ. ಬನ್ನಿ, ದೇವಸ್ಥಾನಕ್ಕೆ ಹೋಗಿ ಭಗವಂತನ ದರ್ಶನವನ್ನು ಮಾಡೋಣ.'' ಭಾಸ್ಕರರಾವ್ ಉದ್ಗರಿಸಿದರು, ''ಏನು, ಈ ರೋಗಿ, ಅಸಹಾಯಕರ ಸೇವೆಯು ಭಗವಂತನ ಪೂಜೆಗಿಂತ ಕಡಿಮೆ ಎಂದುಕೊಂಡೆಯಾ? ನಿರ್ಧನ, ರೋಗಿ, ಅಸಹಾಯಕರ ಸೇವೆಯೂ ಭಕ್ತಿಯ ಒಂದು ಮುಖ.'' ಇದನ್ನು ಕೇಳಿಸಿಕೊಂಡ ಸುತ್ತಮುತ್ತಲ ಶಿಷ್ಯರ ಕಣ್ಣುಗಳು ತುಂಬಿ ಬಂದವು, ಅವರ ಮನಸ್ಸು ಆರ್ದ್ರವಾಯಿತು.

*('ಕಲ್ಯಾಣ', ಜನವರಿ ೨೦೧೫, '**ಸೇವಾ ಅಂಕ**' ದಿಂದ ಅನು: ಮಾತಾ ತ್ಯಾಗಮಯೀ)*





# ಸ್ವಾಮಿ ಅಖಂಡಾನಂದರ ಸ್ಮೃತಿಸಂಚಯ

ಬಂಗಾಳಿ ಮೂಲ: **ಸ್ವಾಮಿ ನಿರಾಮಯಾನಂದ** ಕನ್ನಡಕ್ಕೆ: **ಕುಮಾರಿ ಪಿ.ಉಷಾ**

**ಭಾಗ ೧೩**

ಸ್ವಲ್ಪ ಸಮಯ ಬಾಬಾ ಸುಮ್ಮನಿದ್ದು ತಮ್ಮಲ್ಲೆ ಹಾಡುತ್ತಿದ್ದಾರೆ:

**೧.ಆಮಿ ಬ್ರಹ್ಮಮಯೀರ್ ಬೇಟಾ..**

*(ನಾನು ಬ್ರಹ್ಮಮಯಿಯ ಪುತ್ರ..)*

**೨.ವಿಶ್ವಪತಿ ಜೇನಿ ಆಮಿ ಪುತ್ರ ತಾರ್**
**ಪಿತೃಧನೇ ಮಮ ಪೂರ್ಣ ಅಧಿಕಾರ್**

*(ನಾನು ವಿಶ್ವಪತಿಯ ಪುತ್ರನೇ ಆಗಿರುವಾಗ ತಂದೆಯ ಆಸ್ತಿಯಲ್ಲಿ ನನಗೆ ಪೂರ್ಣ ಅಧಿಕಾರವಿದೆ..)*

ಸ್ವಲ್ಪ ನಂತರ ಹೇಳುತ್ತಿದ್ದಾರೆ: ''೧೮೯೧ರಲ್ಲಿ ಎಟೋವಾದಲ್ಲಿ ಜನ್ಮಾಷ್ಟಮಿಯಂದು ಠಾಕೂರರ ದರ್ಶನವಾಯಿತು. ಉಪವಾಸ ವಿದ್ದುಕೊಂಡು ಭಾಗವತ ಓದುತ್ತಿದ್ದೆ. ಸ್ವಲ್ಪ ಓದಿದ ಮೇಲೆ ಪುಸ್ತಕ ದಲ್ಲಿ ತಲೆ ಹುದುಗಿಸಿ ಠಾಕೂರರ ಮಾತುಗಳನ್ನು ಆಲೋಚಿಸು ತ್ತಿದ್ದೆ. ಹೀಗಿರುವಾಗ ನನ್ನ ತಲೆಯ ಬಳಿ ಠಾಕೂರರು ನಿಂತು, ನಗುತ್ತ, 'ಏನಪ್ಪ, ನಾನು ಬಂದಿದ್ದೇನಲ್ಲಾ, ಅದನ್ನು ಜನರು ತಿಳಿದುಕೊಂಡಿದ್ದಾರೆಯೆ?' ಎಂದರು.

* * *

''ಸನ್ಯಾಸಿಗಳ ಕೋಪ ಹೆಚ್ಚು ಹೊತ್ತು ಇರಲಾರದು. ಕೋಪ ವಿದ್ದರೆ ಅವರು ಸಾಧುಗಳು ಹೇಗಾಗುತ್ತಾರೆ? 'ಒಬ್ಬ ಈ ಕೈಯಿಂದ ನಮ್ಮ ಮೇಲೆ ಮಲವನ್ನು ಎಸೆಯುತ್ತಿದ್ದಾನೆ, ಆ ಕೈಯಿಂದ ಮತ್ತೊಬ್ಬ ಶ್ರೀಗಂಧವನ್ನು ಹಚ್ಚುತ್ತಿದ್ದಾನೆ. ನಾನು ಇವನ ಮೇಲೆ ಕೋಪಗೊಳ್ಳುವುದೂ ಇಲ್ಲ, ಅವನೆಡೆಗೆ ಆಕರ್ಷಿತನಾಗುವುದೂ ಇಲ್ಲ. ಸುಮ್ಮನೆ ಕುಳಿತಿದ್ದೇನೆ' ಎಂಬುದಾಗಿ ನಾವು ಧ್ಯಾನಿಸಿದ್ದೇವೆ.

''ಶ್ರೀರಾಮಕೃಷ್ಣರು ಹೇಳುತ್ತಾರೆ: ಕಾಮ, ಕ್ರೋಧ, ಲೋಭ – ಇವುಗಳು ಹೋಗುವವೆ? ದಾರಿ ತಿರುಗಿಸಿದಾಗ ಅಡಚಣೆಗಳೇ ಸಹಾಯಕಾರಿಯಾಗುತ್ತವೆ. ಭಗವಂತನನ್ನು ಪಡೆಯುವ ಆಸೆ ಯನ್ನಿಟ್ಟುಕೋ. ಪ್ರೀತಿ, ದ್ವೇಷವೆಲ್ಲವೂ ಆತನ ಮೇಲೆಯೇ ಇರಲಿ. ಆತನ ನಾಮ, ರೂಪ, ಲೀಲೆಗಳಲ್ಲೇ ಲೋಭವಿರಲಿ. ಆತನ ರೂಪದಿಂದ ಮೋಹಿತನಾಗಿ ಅದರಿಂದ ಮುಗ್ಧನಾಗಿ ಹೋಗು. 'ನಮಗೆ ಆತನ ಆಶ್ರಯ ದೊರಕಿದೆ, ನಾನು ಆತನನ್ನು ಪ್ರೀತಿಸುತ್ತೇನೆ' ಎಂಬ ಮದ, ಅಹಂಕಾರ ಬೇಕಿದ್ದರೆ ಇರಲಿ. ಮಾತ್ಸರ್ಯ,ಅಸೂಯೆ ಇರುವುದಿದ್ದರೆ, 'ಅವನೆಷ್ಟು ಜಪ-ಧ್ಯಾನ ಮಾಡುತ್ತಾನೆ, ಅವನಿಗೆ ಎಂಥ ವ್ಯಾಕುಲತೆ, ಕಣ್ಣೀರು, ರೋಮಾಂ ಚನವಾಗುತ್ತಿವೆ. ನನಗೇಕೆ ಆಗುತ್ತಿಲ್ಲ? ಅವನು ಭಗವಂತನನ್ನು ಪಡೆದಿರುವಾಗ ನನಗೇಕೆ ಸಾಧ್ಯವಿಲ್ಲ?' ಎಂದೇ ಇರಲಿ.

''ಯಾರ ಭವಿಷ್ಯದಲ್ಲೇನಿದೆ ಎಂಬುದು ತಿಳಿಯಲಾಗದಿದ್ದರೆ ಇಷ್ಟು ದಿನ ನಾವು ಮಾಡಿದ್ದಾದರೂ ಏನು? ಠಾಕೂರರ ಆಶ್ರಯ, ಆಶೀರ್ವಾದ, ಕೃಪೆ ಯಾರಿಗಾಗುವುದು, ಯಾರಿಗೆ ಹೇಗೆ ಅವರು ದರ್ಶನವನ್ನು ಕೊಡುವರೋ ಅದನ್ನೆಲ್ಲ ಅರಿತುಕೊಂಡು, ಯಾರಿಗೆ ಏನು ಹೇಳಬೇಕೋ ಹೇಳುತ್ತೇನೆ. ''

* * *

''ಈ ವರ್ಷ ಇದೇ ಹುಲ್ಲಿನ ಮನೆಯಲ್ಲಿ ಹಗಲುರಾತ್ರಿ ಎನ್ನದೆ ಚಂಡಮಾರುತ ಬೀಸಿತು, ರಾತ್ರಿ ಬಹಳ ತೀವ್ರಗೊಂಡಿತು. ಠಾಕೂರರ (ಶ್ರೀರಾಮಕೃಷ್ಣರ) ಚಿತ್ರದ ಮುಂದೆ ನಿಂತು ಬಿರು ಗಾಳಿ ನಿಲ್ಲಲು ಪ್ರಾರ್ಥಿಸಿದೆ. ಆಮೇಲೆ ಸ್ವಲ್ಪ ಹೊತ್ತು ಮಲಗಿದೆ. ಮತ್ತೆ ಬಿರುಗಾಳಿ ಹೆಚ್ಚಾಯಿತು. ಈ ರೀತಿ ೧೯-೨೦ ಸಲ ಆಯಿತು. ಹುಲ್ಲಿನ ಛಾವಣಿ ಹಾರಿಹೋಗುತ್ತಿತ್ತೆಂದು ಕಂಬಕ್ಕೆ ಕಟ್ಟ ಲಾಯಿತು. ಅನಂತರ ಎಲ್ಲರೂ ಹೊರಬಂದೆವು. ಒಬ್ಬ ಇನ್ನೂ ಮಲಗಿದ್ದ. ಅವನನ್ನೆಬ್ಬಿಸಿ ಹೊರಗೆ ಕರೆತಂದೆ. ಸ್ವಲ್ಪ ಹೊತ್ತಿನಲ್ಲೆ ಅವನು ತಲೆಯಿಟ್ಟು ಮಲಗಿದ್ದ ಜಾಗದಲ್ಲಿ ಇಟ್ಟಿಗೆಯೊಂದು ಬಿತ್ತು. ಠಾಕೂರರೇ ಅವನನ್ನ ಕರೆದುಕೊಂಡು ಬಂದಿದ್ದರು.''

* * *

''ಅಡುಗೆಯವನು ಹೊರಟುಹೋಗಿದ್ದ. ನಾನೇ ಎರಡು ಹೊತ್ತೂ ಅಡುಗೆ ಮಾಡಬೇಕಾಗಿತ್ತು. ಪಾತ್ರೆ ತೊಳೆಯುವುದು, ಬಡಿಸುವುದು ಎಲ್ಲವನ್ನೂ ಮುಗಿಸಿ ರಾತ್ರಿಯಿಡೀ ಬರೆಯುತ್ತಿದ್ದೆ. ಆಗ 'ಉದ್ಬೋಧನ'ದಲ್ಲಿ ಲೇಖನಗಳು ಪ್ರಕಟವಾಗುತ್ತಿದ್ದವು.

''ರಾತ್ರಿ ೯ರಿಂದ ಮುಂಜಾನೆಯವರೆಗೆ ಲಾಟೀನು ಉರಿಯು ತ್ತಿತ್ತು ; ಬೆಳಗ್ಗೆಯಾಗುತ್ತಿದೆ, ಇನ್ನೂ ದೀಪ ಉರಿಯುತ್ತಿತ್ತು, ನಾನು 'ಹಿಮಾಲಯದ ಮಡಿಲಲ್ಲಿ' ಬರೆಯುತ್ತಿದ್ದೆ. ಹಿಮಾಲಯ ಯಾತ್ರೆಯ ಬಗ್ಗೆ ಇನ್ನೂ ಸ್ವಲ್ಪ ಮುಂದುವರೆಸದಿದ್ದರೆ ಆ ಭಾವವು ಹೊರಟುಹೋಗುತ್ತದೆ, ಅದು ಮರಳಿ ಬರುವುದಿಲ್ಲ. ಠಾಕೂರರು ನಿರಂತರ ವಿಷಯಗಳನ್ನು ಪೂರೈಸುತ್ತಿದ್ದಾರೋ ಎಂಬಂತೆ ಬರೆಯುತ್ತಿದ್ದೆ.

''ಮುಂಜಾನೆ ವಿಪರೀತ ಚಳಿ, ಮೈ ನಡುಗುತ್ತಿತ್ತು. ನಾನು ಬರೆಯುತ್ತ ಸ್ಥಿರವಾಗಿಬಿಡುತ್ತಿದ್ದೆ. ಭಾವನೆ ಎಷ್ಟೊಂದು ಗಾಢವಾಗಿ ಬಿಡುತ್ತಿತ್ತೆಂದರೆ, ಎದುರಲ್ಲೇ ಹಿಮಾಲಯವಿದೆ ಎಂದೆನಿಸುತ್ತಿತ್ತು– ಶುಭ್ರ ತುಷಾರ ಶೃಂಗಗಳು, ನಿರ್ಜನ ನೀರವ ಪ್ರದೇಶ – ನಾನು ಮತ್ತೆ ಅಲ್ಲಿಗೆ ಹೋದಂತೆ ಅನ್ನಿಸುತ್ತಿತ್ತು . ಅಷ್ಟರಲ್ಲಿ ಕತ್ತಲೊಡೆದು ಬೆಳಕು ಹರಿಯುತ್ತಿತ್ತು. ಲಾಟೀನಿನ ಬೆಳಕು ಕೆಂಪಾಯಿತು, ಕಾಗೆ,

ಕೋಗಿಲೆಗಳು ಕೂಗಿ ಕರೆಯತೊಡಗಿದವು. ನಾನು ಬರೆಯುವು ದನ್ನು ನಿಲ್ಲಿಸಿ, ಹುಡುಗರನ್ನೆಲ್ಲ ಎಬ್ಬಿಸಿದೆ. ಮತ್ತೆ ಎಂದಿನ ಕೆಲಸ ಗಳು ಪ್ರಾರಂಭವಾದವು.

''ಹೀಗೆ ನಿದ್ದೆಗೆಟ್ಟು ಒಂಬತ್ತು ದಿನ ಕಳೆದವು. ೯ನೇ ದಿನದಂದು ರಾತ್ರಿಹೊತ್ತು ಬರೆಯಲು ಕುಳಿತಿದ್ದೆ. ನಾನು ಭಾವಭರಿತನಾಗಿ ಬರೆಯುತ್ತಿದ್ದೆ, ಆದರೆ ಲೇಖನ ಕೆಟ್ಟುಹೋಗಿ ಗೋಜಲು ಗೋಜ ಲಾಯಿತು. ಮುಂದಕ್ಕೆ ಬರೆಯಲಾಗಲಿಲ್ಲ, ಮಲಗಿಬಿಟ್ಟೆ. ಅಂದು ಅದೆಂಥ ನಿದ್ರೆ ಬಂತೆಂದರೆ, ಜೀವನದಲ್ಲಿ ಎಂದೂ ಹಾಗೆ ನಿದ್ರಿಸಿಲ್ಲ!''

* * *

''ಬೇಲೂರು ಮಠಕ್ಕೆ ಹೋದರೆ ಮಹಾರಾಜ್ (ಸ್ವಾಮಿ ಬ್ರಹ್ಮಾನಂದರು) ಸಾಮಾನ್ಯವಾಗಿ ಮರಳಿ ಬರಲು ಬಿಡುತ್ತಿರಲಿಲ್ಲ. ಏನಾದರೊಂದು ಉಪಾಯ ಹೂಡಿ ತಡೆಯುತ್ತಿದ್ದರು. 'ಏಕೆ ತಮ್ಮಾ, ಅಲ್ಲಿ ಒಬ್ಬನೇ ಇರುತ್ತೀಯೇನು? ಇಲ್ಲಿ ಎಂಥ ಆನಂದ ವಿದೆ!' ಎನ್ನುತ್ತಿದ್ದರು. ನಾನು ಕಲ್ಕತ್ತೆಗೆ(ಅಂದರೆ ಪಟ್ಟಣಕ್ಕೆ) ಬರುವ ನೆಪದಲ್ಲಿ ಈ ಕಡೆ ಬಂದುಬಿಡುತ್ತಿದ್ದೆ, ನಂತರವೇ ಅವರಿಗೆ, 'ಮಹಾರಾಜ್ ಈ ಯಾತ್ರೆಗೆ ಅನುಮತಿ ಕೊಡಿ' ಎಂದು ತಿಳಿಸು ತ್ತಿದ್ದೆ. ಒಮ್ಮೆ ತಲೆಗೆ ಪಗಡಿ ಸುತ್ತಿಕೊಂಡು, ಸೊಂಟಕ್ಕೆ ಕೈಕೊಟ್ಟು ಮಹಾರಾಜರಿಂದ ಬೀಳ್ಕೊಳ್ಳಲು ಹೋಗಿದ್ದೆ. ಮಹಾರಾಜರು, 'ಏನು, ನಿನ್ನ ಈ ಭಂಗಿ ಯಜಮಾನನಿಗೆ ತಕ್ಕ ಹಾಗಿದೆ. ಎಲ್ಲಿಗೆ ಹೊರಟಿರುವೆ? ಯಾವ ದಿಗ್ವಿಜಯಕ್ಕೆ?' ಎಂದು ಕೇಳಿದರು.

''ಇಲ್ಲಿಂದ ಒಮ್ಮೆ incognito (ಛದ್ಮವೇಷದಲ್ಲಿ) ಹೊರ ಟಿದ್ದೆ. ಯಾರಿಗೂ ಏನೂ ತಿಳಿಸಿರಲಿಲ್ಲ. ನನ್ನ ಮನಸ್ಸು ಕೆಟ್ಟು ಹೋಗಿತ್ತು. 'ಠಾಕೂರರ ಭಕ್ತನಲ್ಲದಿದ್ದರೆ, ಅಥವಾ ಅವ ರಿಗೆ ವಿರುದ್ಧವಾಗಿ ಏನಾದರೂ ಹೇಳಿದ್ದರೆ ನಾನು ಅಲ್ಲಿ ಏನೂ ತಿನ್ನ ಲಾರೆ, ಅಲ್ಲಿ ತಂಗಲಾರೆ' ಎಂದು ನಿರ್ಧರಿಸಿ ನಡೆದೆ.

''ಮುಡಾಗಾಛಾದ ರಸ್ತೆ ಬದಿಯಲ್ಲಿ ಹುಡುಗರು ಮಾತನಾಡಿ ಕೊಳ್ಳುತ್ತಿದ್ದುದು ಕೇಳಿಸಿತು: 'ಠಾಕೂರರು ಬಂದಿದ್ದರು. ಆದ್ದರಿಂದ ಧರ್ಮ, ದೇವ-ದೇವಿಯರು - ಇವನ್ನೆಲ್ಲ ನಂಬದಿರಲು ಸಾಧ್ಯ ವಿಲ್ಲ.' ವೃದ್ಧರು ತಮ್ಮಲ್ಲೇ ಹೇಳಿಕೊಳ್ಳುತ್ತಿದ್ದರು, 'ಓ! ಠಾಕೂರರು ಪತಿತಪಾವನರು, ಜಗತ್ಪಾವನರು.' ಆಗ ಹೀಗಂದುಕೊಂಡೆ- 'ವಾಹ್, ಠಾಕೂರ್; ಈಗಾಗಲೇ ಇಲ್ಲಿ ಬಂದು ಕುಳಿತುಬಿಟ್ಟಿ ದ್ದೀಯೆ!' ಶ್ರೀಮಾತೆಯವರಿಂದ ದೀಕ್ಷೆ ಪಡೆದ ಭಕ್ತರೊಬ್ಬರು ಊಟಮಾಡಲು ಹೇಳಿದರು. ಆಗ ನಾನು, 'ನಂತರ ತಿನ್ನುತ್ತೇನೆ, ಭಗವಂತನ ಇಚ್ಛೆಯಿದ್ದರೆ' ಎಂದು ಹೇಳಿ, ಮತ್ತೆ ಹೊರಟೆ. ನಡೆ ಯುತ್ತಿದಂತೆ ಆಗಾಗ ಆಶ್ರಮದ ಚಿಂತೆಯಾಗುತ್ತಿತ್ತು. ಹದಿನೈದು ನಿಮಿಷ ಮೌನವಾಗಿ ಕುಳಿತು ಠಾಕೂರರನ್ನು ಧ್ಯಾನಿಸುತ್ತಿದ್ದೆ. ಆಗ ಎಲ್ಲವೂ ಸರಿಹೋಗುತ್ತಿತ್ತು.

* * *

''ಮಹಾರಾಜ್ (ಸ್ವಾಮಿ ಬ್ರಹ್ಮಾನಂದಜಿ) ಅವರ ಮಾತು ಗಳು 'ಉದ್ಬೋಧನ'ದಲ್ಲಿ ಪ್ರಕಟವಾಗಿವೆ - 'ಯೋಗಿಗೆ ೪ ಗಂಟೆ ನಿದ್ದೆ, ಭೋಗಿಗೆ ೬ ಗಂಟೆ' ಎಂದು. ರೋಗಿಯ ನಿದ್ದೆ ಅದಕ್ಕೂ ಹೆಚ್ಚು, ಅಷ್ಟು ನಿದ್ರಿಸುವುದಾದರೂ ಹೇಗೆ? ಅಂತರಂಗದಲ್ಲಿ ಬೆಂಕಿ ಧಗ ಧಗನೆ ಉರಿಯುತ್ತಿರುವವನು ಹೇಗೆ ನಿದ್ರಿಸಬಲ್ಲ? ಅವನು ಯಾವಾಗಲೂ ಎಚ್ಚರವಿದ್ದು ಅಳುತ್ತಾನೆ, 'ದರ್ಶನ ನೀಡು, ದರ್ಶನ ನೀಡು! ಇಂದೂ ದರ್ಶನವಾಗಲಿಲ್ಲವಲ್ಲ!' ಅಂತ.

''ಠಾಕೂರರ ಬಳಿ ಇದ್ದಾಗ ಈ ಹಾಡುಗಳನ್ನು ಹಾಡುತ್ತಿದ್ದೆವು:

**ವೃಥಾ ಬೊಯೇ ಜಾಯ್ ರಜನೀ, ಏಲೋ ಸಜನೀ!**
**ಸೇಜ ಬಿಛಾಯನೂ... ಪಂಥ ನೇಹಾರನೂ...**
**ಹಾತೋ ಕೀ ದರಪನ್ ಮಾಥೊ ಕಿ ಫೂಲ್!**

''ಇವೆಲ್ಲಾ ಶ್ರೀರಾಧೆಯ ವಿರಹದ ಹಾಡುಗಳು. ಹೂವಿನ ಶಯ್ಯೆ, ಪಲ್ಲಂಗ ಎಲ್ಲವೂ ಇವೆ, ಆದರೆ ಕೃಷ್ಣನೆಲ್ಲಿ? ಠಾಕೂರರು ಹಾಸಿಗೆಯ ಮೇಲೆ ಕೈಯಾಡಿಸುತ್ತಾ ಸ್ಥಿರವಾಗಿಬಿಡುತ್ತಿದ್ದರು. ಅನಂತರ ಗಟ್ಟಿಯಾಗಿ ರೋದಿಸುತ್ತಿದ್ದರು. ಇಡೀರಾತ್ರಿ ನಿದ್ದೆ ಹೊರಟುಹೋಗುತ್ತಿತ್ತು.

''ಆರಂಭದ ಅವಸ್ಥೆಯಲ್ಲಿ ಅವರು ಗಂಗೆಯ ಮರಳಿನಲ್ಲಿ ಮುಖವನ್ನು ಉಜ್ಜುತ್ತಿದ್ದರು. ಆಗ ರಕ್ತ ಸುರಿಯುತ್ತಿತ್ತು. ಅಂಬಿಗ ರೆಲ್ಲ ಆಶ್ಚರ್ಯಚಕಿತರಾಗಿ, 'ಅಯ್ಯೋ ಪಾಪ!' ಎನ್ನುತ್ತಿದ್ದರು. ಸೂರ್ಯಾಸ್ತವಾಗಿ ಸಂಧ್ಯಾರತಿಯ ಗಂಟೆ ಹೊಡೆಯಿತೆಂದರೆ ಠಾಕೂರರು ಪಂಚವಟಿಯ ಕಾಡಿಗೆ ಹೋಗಿ, ಪಶ್ಚಿಮ ದಿಕ್ಕಿನತ್ತ ದಿಟ್ಟಿಸುತ್ತಾ ಅಳುತ್ತ, 'ತಾಯಿ, ಇನ್ನೊಂದು ದಿನ ಕಳೆದು ಹೋಯಿತು. ತಾಯಿ, ನೀನಿನ್ನೂ ದರ್ಶನ ನೀಡಲಿಲ್ಲ!' ಎಂದು ಹೇಳುತ್ತಿದ್ದರು.

''ಠಾಕೂರರ ಬಳಿ ಯಾರು ಒಂದು ದಿನವಾದರೂ ಕುಳಿತಿ ದ್ದಾರೊ, ಒಂದೇ ಒಂದು ಕ್ಷಣವಾದರೂ ಯಾರು ಅವರ ಪಾದ ಗಳನ್ನು ತಮ್ಮ ಮಡಿಲಿನಲ್ಲಿಟ್ಟುಕೊಂಡಿದ್ದಾರೋ, ಅವರೇ ಧನ್ಯರು! ಒಂದು ಬಾರಿ ಠಾಕೂರರು ಹಾಸಿಗೆಯ ಮೇಲೆ ಕಾಲು ಗಳನ್ನು ನೆಲಕ್ಕೆ ಇಳಿಬಿಟ್ಟು ಕುಳಿತಿದ್ದರು, ತಮ್ಮ ಎರಡೂ ಕಾಲು ಗಳನ್ನು ಚಾಚಿ ನನ್ನ ಮಡಿಲಿನಲ್ಲಿರಿಸಿದರು. ಅವರು ಅನೇಕ ವಿಷಯಗಳನ್ನು ಕುರಿತು ಮಾತುಗಳನ್ನಾಡುತ್ತ ನನ್ನ ಮನಸ್ಸಿನ ಭಾವವನ್ನು ಪರೀಕ್ಷಿಸುತ್ತಿದ್ದರು. ಮಹಾರಾಜ್ ಕೂಡ ಹಿಂದೊಮ್ಮೆ ಈ ರೀತಿ ಹೇಳಿದ್ದರು.

''ನಾನು ಠಾಕೂರರ ಪಾದಗಳ ಹೆಬ್ಬೆರಳುಗಳನ್ನು ಹಿಡಿದು ಕೊಂಡು ಚೆನ್ನಾಗಿ ನನ್ನ ಹಣೆಗೆ ಉಜ್ಜತೊಡಗಿದೆ. ಆಗ ಠಾಕೂರ ರೆಂದರು, 'ಅದೇನು, ಅದೇನು ಮಾಡುತ್ತಿದ್ದೀ?' ನಾನೆಂದೆ, 'ಏಕೆ? ತಿಲಕವನ್ನಿಟ್ಟುಕೊಳ್ಳುತ್ತಿದ್ದೇನೆ, ಇದು ಸಾತ್ವಿಕವಾದ ತಿಲಕ. ನೀವೇ ಹೇಳಿದಿರಿ, ರಾಜಸಿಕ ತಿಲಕವೆಂದರೆ ಶ್ರೀಗಂಧದ ತಿಲಕ;

ಸಾತ್ತ್ವಿಕ ತಿಲಕವೆಂದರೆ ನಿರಾಡಂಬರವಾಧ ಗಂಗಾಜಲದ ತಿಲಕ ಎಂದು. ಅದು ಕಾಣಿಸುವುದಿಲ್ಲ, ಆದರಿಂದ ಇದೇ ಗಂಗಾಜಲದ ತಿಲಕ, ಇದನ್ನಿಟ್ಟುಕೊಳ್ಳುತ್ತಿದ್ದೇನೆ!' ಠಾಕೂರರು ಚೆನ್ನಾಗಿ ನಕ್ಕರು.

''ಠಾಕೂರರು, 'ನೋಡು, ನೋಡು' ಎಂದಾಗ ನಿಜವಾಗಿ ನಾವು ನೋಡುತ್ತಿದ್ದೆವು. ನಿಜ ಹೇಳುತ್ತಿದ್ದೇನೆ, ಠಾಕೂರರ ಭಾವವನ್ನು ಈ ಭಾಗದಲ್ಲಿ ಯಾರು ತಿಳಿಯುವರು? ಭಾವವನ್ನು ತಿಳಿಯಬೇಕಾದರೆ ಅದಕ್ಕೆ ಸಾಮರ್ಥ್ಯ ಬೇಕು. ಸ್ವತಂತ್ರ ದೇಶಗಳಲ್ಲೆಲ್ಲ ಅವರ ಭಾವ ವಿಶೇಷವಾಗಿ ಹರಡುತ್ತಿದೆ, ಮುಂದೆಯೂ ಹರಡುವುದು.''

**೩೦ ಡಿಸೆಂಬರ್ ೧೯೩೬:** ಹಿಂದಿನ ರಾತ್ರಿ ಸ್ವಾಮಿ ಅಖಂಡಾನಂದರು ಏನನ್ನೂ ತಿಂದಿರಲಿಲ್ಲ. ಮಾರನೆಯ ಬೆಳಗ್ಗೆ ಸ್ವಲ್ಪ ದುರ್ಬಲರಾಗಿದ್ದರು. ಅವರೆಂದರು: ''ನೋಡು, ತಿಂದು ದುರ್ಬಲನಾಗುವುದು ಬಹಳ ಹಾನಿಕರ. ತಿನ್ನದೆ ದುರ್ಬಲನಾದರೆ ಒಳ್ಳೆಯದು. ಆದರಿಂದ ಆತ್ಮಶಕ್ತಿ ಹೆಚ್ಚುತ್ತದೆ.'' ಸ್ವಲ್ಪ ಹೊತ್ತು ಸುಮ್ಮನಿದ್ದು, ಬಳಿಕ ಮನಸ್ಸಿನಲ್ಲೇ ಹೇಳಿಕೊಳ್ಳುತ್ತಿದ್ದಾರೆ – 'ತೋರಿಸು ಪ್ರಭು, ತೋರಿಸು. ಈ ವೃದ್ಧ ಶರೀರದ ಮೇಲೆ ನಿನ್ನ ಆಟ, ನಿನ್ನ ಶಕ್ತಿ ಎಂಥದು ಎಂಬುದನ್ನು ತೋರಿಸು.'

* * *

ಬೆಳಗ್ಗೆ ೮ ಗಂಟೆಯ ರೈಲಿನಲ್ಲಿ ರಾಣಾಘಾಟ್‌ನಿಂದ ಬಂದ ಒಬ್ಬ ಭಕ್ತ ಹಾಗೂ ಒಬ್ಬಾಕೆ ಮಹಿಳೆ ಮಹಾರಾಜರಿಗೆ ಪ್ರಣಾಮ ಮಾಡಿ ಕುಳಿತರು. ಅವರಿಬ್ಬರೂ ದೀಕ್ಷಾರ್ಥಿಗಳು. ಅವರ ಜೊತೆ ಸ—, ಬಾಬಾರಿಂದ ದೀಕ್ಷೆ ಪಡೆದ ಪ್ರಿಯಶಿಷ್ಯನೊಬ್ಬ ಬಂದಿದ್ದಾನೆ. ಆ ಮಹಿಳೆ ಸ—ರ ಅಕ್ಕ. ಬಹಳ ದಿನಗಳಿಂದ ಆತನಿಂದ ಬಾಬಾ ಕುರಿತ ವಿಷಯಗಳನ್ನು ಕೇಳಿ, ಈಗ ಪತಿ–ಪತ್ನಿಯರಿಬ್ಬರೂ ದೀಕ್ಷೆ ಪಡೆಯುವ ಆಕಾಂಕ್ಷೆಯಿಂದ ಬಂದಿದ್ದಾರೆ.

ಬಾಬಾ ಕುರ್ಚಿಯಲ್ಲಿ ಆರಾಮವಾಗಿ ಕುಳಿತುಕೊಂಡು ಮಠದಲ್ಲಿ ಅವರು ಪ್ರಥಮಬಾರಿ ದೀಕ್ಷೆ ನೀಡಿದ ವಿಚಾರ ಹೇಳಲಾರಂಭಿಸಿದರು:

''ದಕ್ಷಿಣ ಭಾರತದಿಂದ ಹುಡುಗನೊಬ್ಬ ದೀಕ್ಷೆಗೆಂದು ಬೇಲೂರು ಮಠಕ್ಕೆ ಬಂದಿದ್ದ. ಅವನು ರೈಲ್ವೆಯಲ್ಲಿ ಕೆಲಸ ಮಾಡುತ್ತಿದ್ದು, ಬಹಳ ಖರ್ಚು ಮಾಡಿಕೊಂಡು ಬಂದಿದ್ದ. ಅವನು ವಿವಾಹಿತ. ಅಣ್ಣ (ಮಹಾಪುರುಷ್ ಮಹಾರಾಜ್) ಆಗ ಅಸ್ವಸ್ಥರಾಗಿದ್ದರು. ಅವರು ನನ್ನನ್ನು ಬೇಲೂರು ಮಠದಲ್ಲಿ ಬೆಂಬತ್ತಿ, 'ಮಹಾರಾಜ್, ನೀವೇ ದೀಕ್ಷೆ ಕೊಡಬೇಕು' ಎಂದರು. ನಾನೆಂದೆ, 'ಯಾವುದನ್ನು ನಾನು ಮಾಡುವುದೇ ಇಲ್ಲವೆಂದುಕೊಂಡಿದ್ದೆನೋ ಅದನ್ನೇ ಮಾಡಬೇಕೆ?' ಸ್ವಾಮೀಜಿ ನನಗೆ ಮೊದಲೇ ಹೇಳಿಕೊಟ್ಟಿದ್ದರು, ಪರ್ಯಟನೆಯ ಕಾಲದಲ್ಲಿ ನಡುನಡುವೆ ಕಲಿಸುತ್ತಿದ್ದರು, 'ಇಂತಿಂಥ ಮಂತ್ರ, ಇಂತಿಂಥ ಇಷ್ಟ' ಎಂದೆಲ್ಲ. ಇವನ್ನೆಲ್ಲ ನನಗೇಕೆ ಹೇಳುತ್ತಾರೆಂದು ಆಗ ಅರ್ಥವಾಗುತ್ತಿರಲಿಲ್ಲ, ನಂತರ ಪತ್ರಗಳಲ್ಲೂ ಬರೆಯುತ್ತಿದ್ದರು, 'ತಲೆಯನ್ನು ಬೋಳಿಸು, ಶಿಷ್ಯರನ್ನು ಸ್ವೀಕರಿಸು' ಎಂದು. ಆಗ ಸ್ವಲ್ಪ ಸ್ವಲ್ಪ ಅರ್ಥವಾಯಿತು. ಆದರೆ ವಿವಾಹಿತರಿಗೆ ದೀಕ್ಷೆ ನೀಡುವುದಿಲ್ಲವೆಂದು ಆಗಲೇ ನಾನು ಖಚಿತಪಡಿಸಿಕೊಂಡಿದ್ದೆ.

''ಆದ್ದರಿಂದ ಬೇಲೂರು ಮಠದಲ್ಲಿ ಬೇಸರವಾಗಿತ್ತು. ಒಂದು ಸಂಜೆ ಮಂಚದ ಮೇಲೆ ಒಬ್ಬನೇ ಕುಳಿತಿದ್ದೆ. ಕೊನೆಗೆ ಕೇಶವ ಸೇನರ ಮನೆಯಲ್ಲಿ ಠಾಕೂರರು ಹೇಳಿದ ಮಾತುಗಳು ನೆನಪಾಯಿತು, ಅವರೇ ಅದನ್ನು ನೆನಪಿಸಿದರು. (ಹಿಂದಿನ ಘಟನೆಯನ್ನು) ಸ್ಪಷ್ಟವಾಗಿ ನೋಡುತ್ತಿದ್ದೆ – ಜನಭರಿತ ಕೋಣೆಯಲ್ಲಿ ಠಾಕೂರರು ಹೇಳುತ್ತಿದ್ದಾರೆ: 'ಕೇಶವ್... ಇಂದಿನಿಂದ ಇಬ್ಬರೂ ಅಣ್ಣ–ತಂಗಿಯರಂತೆ ಇರಬೇಕು..' ದೀಕ್ಷೆಗಾಗಿ ಬಂದವರಿಗೆಲ್ಲಾ ನಾನೂ ಇದನ್ನೇ ಹೇಳುತ್ತೇನೆಂದು ನಿರ್ಧರಿಸಿದೆ. ಮೊದಮೊದಲು ದೀಕ್ಷೆ ಪಡೆಯುವವರಿಂದ ಪ್ರತಿಜ್ಞೆ ಬರೆಸಿಕೊಳ್ಳುತ್ತಿದ್ದೆ 'ಅಣ್ಣ–ತಂಗಿಯರಂತೆ ವಾಸಿಸುತ್ತೇವೆ'. ನಿಜ, ಕಾಡಿಗೆಯ ಕೋಣೆಯಲ್ಲಿ ವಾಸಿಸಿದರೆ ಎಷ್ಟೇ ಜಾಗ್ರತೆಯಿಂದಿದ್ದರೂ, ಸ್ವಲ್ಪವಾದರೂ ಕಾಡಿಗೆ ತಗಲಿಯೇ ತಗಲುತ್ತದೆ.''

ಈ ಮಾತುಗಳನ್ನಾಡಿದ ಬಳಿಕ ಬಾಬಾ ಸುತ್ತಲೂ ಕಣ್ಣು ಹಾಯಿಸಿದರು. ಕುರ್ಚಿಯ ಹಿಂದೆ ಡೆಸ್ಕಿನ ಮೇಲೆ ಕಾಗದ ಪತ್ರಗಳು ಹಾಗೂ ಸ್ಮೃತಿಕಥೆಯನ್ನು ಬರೆಯುತ್ತಿದ್ದ ಭಕ್ತನಿಗೆ, 'ಏಯ್, ನೀನಿಲ್ಲಿ ಕುಳಿತು ಕತೆ ಕೇಳುತ್ತಿದ್ದೆಯಾ? ಇಷ್ಟೊಂದು ಮಾತುಗಳ ನಡುವೆ ಏನು ಬರೆಯುತ್ತಿದ್ದೀಯೆ? ಆ ಕೋಣೆಗೆ ಹೋಗಿ ಬರೆ'' ಎಂದರು.

ಭಕ್ತ ಎದ್ದುಹೋದಾಗ ಬಾಬಾ ರಾಣಾಘಾಟಿನ ಭಕ್ತರನ್ನು ಇನ್ನೂ ಹತ್ತಿರ ಕರೆದು ಏನೋ ಪ್ರಶ್ನಿಸಿ, ಇನ್ನೇನೋ ಹೇಳಿದರು. ನಂತರ ಅವರೆಲ್ಲ ಸ್ನಾನಮಾಡಿ ದೀಕ್ಷೆಗೆ ಸಿದ್ಧರಾಗಲು ಹೋದರು.

ರಾಸಪೂರ್ಣಿಮೆಯ ಸಂಜೆ ಬಾಬಾ ಹೊಸ ಪೆರಾಂಬುಲೇಟರ್ (ಗಾಲಿಕುರ್ಚಿ) ನಲ್ಲಿ ಕುಳಿತು ಆಶ್ರಮದಲ್ಲಿ ಸುತ್ತಾಡುತ್ತಿದ್ದಾರೆ. ಸ್ವಲ್ಪ ಹೊತ್ತು ಕಳೆಯುತ್ತಲೇ ಪೂರ್ವದಿಕ್ಕಿನಲ್ಲಿ ಪೂರ್ಣ ಚಂದ್ರ ಉದಯಿಸುತ್ತಿರುವುದನ್ನು ಗಮನಿಸಿ ಚಂದ್ರನನ್ನೇ ದಿಟ್ಟಿಸುತ್ತ ತಮ್ಮಷ್ಟಕ್ಕೇ ಹಾಡುತ್ತಿದ್ದಾರೆ: 'ಚಂದ್ರ ಬಿತರೇ ಜ್ಯೋತಿ ತೊಮಾರಿ.' ಅನಂತರ ನಿರರ್ಗಳ ಕಂಠದಿಂದ ಇನ್ನೂ ಕೆಲವು ಸಾಲುಗಳನ್ನು ಹಾಡಿದರು. ಚಳಿ ಆರಂಭವಾದುದನ್ನು ನೋಡಿ ಸೇವಕರು ಗಾಡಿಯನ್ನು ವಿನೋದ ಕುಟೀರಕ್ಕೆ ಹಿಂದಿರುಗಿಸಿದರು.

ಮಾಯಾಲಾಂದ್ರ ಸರಿಪಡಿಸಲಾಗಿದ್ದು ಸ್ಲೈಡುಗಳನ್ನು ತೋರಿಸಲಾಗುತ್ತಿದೆ. ಅನೇಕ ಸ್ಲೈಡುಗಳಲ್ಲಿ ಸ್ವಾಮೀಜಿ ಉಕ್ತಿಗಳಿದ್ದವು. ಅವುಗಳನ್ನು ಒಬ್ಬರು ಜೋರಾಗಿ ಓದುತ್ತಿದ್ದರು. ಅದನ್ನು ಕೇಳಿ ಬಾಬಾ ಹೇಳಿದರು, ''ಸ್ವಾಮೀಜಿ ಮಾತುಗಳನ್ನೆಲ್ಲ ಆಂತರಿಕ ಭಾವದಿಂದ ಅನುಭವಿಸುತ್ತಿದ್ದೀರಾ? 'ನನ್ನ ಷಂಡತನ, ದೌರ್ಬಲ್ಯಗಳನ್ನು ದೂರ ಮಾಡು; ತಾಯಿ, ನನ್ನನ್ನು ಮನುಷ್ಯನನ್ನಾಗಿ

ಮಾಡು' – ಈ ಶ್ರೇಷ್ಠ ಪ್ರಾರ್ಥನೆಯನ್ನು ಸ್ವಾಮೀಜಿ ಹೇಳಿಕೊಟ್ಟಿದ್ದರು.''

ಠಾಕೂರರು ಹೇಗೆ, ಅದೆಷ್ಟು ರೀತಿಗಳಲ್ಲಿ ದೀಕ್ಷೆ ಕೊಡುತ್ತಿದ್ದರು ಎಂಬ ವಿಷಯ ಬಂತು. ಅದರ ಸಾರಾಂಶವನ್ನು ಬರೆದು 'ಸ್ಮತಿ ಕಥೆ' ಯಲ್ಲಿ ಸೇರಿಸಲು ಬಾಬಾ ಹೇಳಿದರು. ಒಂದು ದಿನ ಅವರು ರಾಣಿ ಶರತ್‌ಸುಂದರಿಯ ವಿಷಯ ಹೇಳಿ, ಕೊನೆಗೆ ಹೀಗೆಂದರು: ''ಅವಳ ತ್ಯಾಗ–ತಪಸ್ಸುಗಳು ಸಾಧುಗಳ ತ್ಯಾಗ – ತಪಸ್ಸುಗಳಿಗಿಂತ ಕಡಿಮೆಯಲ್ಲ. ಬಡ ಬ್ರಾಹ್ಮಣ ಕನ್ಯೆ, ಜಮೀನುದಾರನ ಹೆಂಡತಿ, ಚಿಕ್ಕ ಪ್ರಾಯದಲ್ಲಿಯೇ ವಿಧವೆಯಾದಳು. ತಾನೇ ಜಮೀನ್ದಾರಿಯನ್ನು ನಡೆಸುತ್ತಿದ್ದಳು ಹಾಗೂ ಜನಸೇವೆಯನ್ನೂಮಾಡುತ್ತಿದ್ದಳು. ಅದರ ಜತೆಜತೆಗೇ ವ್ರತಗಳು, ತಪಸ್ಸು, ಪೂಜೆ, ಪಠಣ.''

ಐದಾರು ಮಂದಿಗೆ ದೀಕ್ಷೆಯಾಗಿದೆ. ದಿನವಿಡೀ ಬಾಬಾ ಅಸ್ವಸ್ಥರು. ಸಂಜೆ ಹೇಳುತ್ತಿದ್ದಾರೆ, ''ಪತ್ರ ಬಂದ ಕೂಡಲೆ, ಏನು ಬರುತ್ತಿದೆಯೆಂಬುದು ನನಗೆ ತಿಳಿಯುತ್ತದೆ.''

* * *

ಇಂದು ಬಾಬಾ ಸಾಧುಸಂಗವನ್ನು ಕುರಿತು ಅನೇಕ ವಿಷಯಗಳನ್ನು ಹೇಳಿದರು – ಕಾಮರಾಜ ತಾಂತ್ರಿಕ, ಮಾಯರಾಮ ಅವಧೂತ, ಗಂಭೀರನಾಥ, ಭಾಸ್ಕರಾನಂದ, ತ್ರೈಲಂಗಸ್ವಾಮಿ ಮುಂತಾದವರ ಬಗ್ಗೆ. ನಂತರ ತಮ್ಮ ಗಂಗೋತ್ರಿ ಯಾತ್ರೆ ಹಾಗೂ ಗುಹೆಯಲ್ಲಿ ತಪಸ್ಸು ಮಾಡುತ್ತಿದ್ದ ಒಬ್ಬ ಬ್ರಹ್ಮಚಾರಿಯನ್ನು ಕುರಿತಾಗಿ ಮಾತನಾಡುತ್ತ ಕೊನೆಗೆ ಹೇಳಿದರು: ''ಗಂಗೋತ್ರಿಯ ಜಲವನ್ನು 'ಸ್ನಾನಯಾತ್ರೆ'ಗೆ ಮೊದಲೇ ಅದು ತಲುಪಬೇಕೆಂದು ಬಾರಾನಗರಕ್ಕೆ ಕಳುಹಿಸಿಕೊಟ್ಟಿದ್ದೆ.''

''ಕಾಮರಾಜ ತಾಂತ್ರಿಕರು, 'ನಿನಗೇನು ಬೇಕು?' ಎಂದು ಕೇಳಿದಾಗ, '**ನ ಶೋಚತಿ ನ ಕಾಂಕ್ಷತಿ** – ಈ ಅವಸ್ಥೆ ನನಗೆ ಬೇಕು' ಎಂದೆ. ಅವರು ಕರುಣಾಪೂರ್ವಕವಾಗಿ ನನ್ನ ಕಡೆ ನೋಡುತ್ತ 'ನಿನಗೆ ನನ್ನ ಜಗನ್ಮಾತೆ ಬೇಡವೆ? ಆತ್ಮಜ್ಞಾನ ಬೇಕೆ?' ಎಂದರು. ಮಾಯಾರಾಮ ಅವಧೂತರು ನಾಲ್ಕು ಬಾರಿ ಚತುರ್ಧಾಮ ಯಾತ್ರೆ ಮಾಡಿದವರು. ಅವರು ದೊಡ್ಡ ತ್ಯಾಗಿಗಳು, ವಿಖ್ಯಾತ ಮಹಾಪುರುಷರು. ಅವರು ಗ್ರಾಮದ ಹೊರಗಡೆ ಕುಳಿತಿರುತ್ತಿದ್ದರು. ಒಮ್ಮೆ ಒಬ್ಬ ಒಂದು ಕಂಬಳಿಯನ್ನು ಅವರಿಗೆ ಕೊಡಲು ಬಂದಾಗ, ಅವರು ತಮ್ಮದೇ ಹಳೆಯ ಕಂಬಳಿಯನ್ನು ತೋರಿಸುತ್ತ, 'ಕಂಬಳಿಯೆ? ಇಲ್ಲೇ ಇದೆಯಲ್ಲ!' ಎಂದರು.

''ಭಾಸ್ಕರಾನಂದರು ಕಾಶಿಯಲ್ಲಿ ನನ್ನನ್ನು ಅತ್ಯಂತ ಪ್ರೀತಿಯಿಂದ ನೋಡಿಕೊಂಡರು. ಒಂದು ದಿನ ಅವರು ತಮ್ಮ ಕೈಯಿಂದಲೇ ನನಗೆ ಉಣಿಸಿದರು.

''ತ್ರೈಲಂಗ ಸ್ವಾಮಿಗಳ ವಿಷಯವಾಗಿ ಠಾಕೂರರು, 'ಅವರಲ್ಲಿ ವಿಶ್ವನಾಥನ ಅಂಶವಿದೆ' ಎಂದಿದ್ದರು. ಅವರು ರಸ್ತೆಯ ಬದಿಯಲ್ಲಿರುತ್ತಿದ್ದರು. ಒಮ್ಮೆ ಅವರನ್ನು ಮ್ಯಾಜಿಸ್ಟ್ರೇಟ್ ಗೋಬಿನ್ ಸಾಹೇಬರ ಬಳಿಗೆ ಕರೆದುಕೊಂಡು ಹೋಗಿ ವಿಚಾರಣೆ ಮಾಡಿದ್ದರು. ಸಾಹೇಬರು ಅವರ ನಿರ್ವಿಕಾರ ಭಾವವನ್ನು ಕಂಡು ಅವರನ್ನು ಬಿಟ್ಟುಬಿಟ್ಟರು. ಇನ್ನುಮುಂದೆ ಯಾರೂ ಅವರಿಗೆ ಏನನ್ನೂ ಹೇಳಬಾರದೆಂದು ಸಾಹೇಬರು ಆಜ್ಞೆಯಿತ್ತರು. ಎತ್ತರವಾದ ಸ್ನಾನಘಟ್ಟದಿಂದ ಗಂಗೆಗೆ ಹಾರಿ, ಕುಂಭಕ ಮಾಡಿ ತೇಲುತ್ತಿದ್ದರು. ಬೇಸಿಗೆಯಲ್ಲಿ ಕಾದ ಫುಟ್‌ಪಾತ್‌ನ ಮೇಲೆ, ಮಾಘಮಾಸದ ರಾತ್ರಿಯ ಚಳಿಯಲ್ಲಿ ಕುತ್ತಿಗೆಯವರೆಗೆ ಗಂಗೆಯಲ್ಲಿ ಇರುತ್ತಿದ್ದರು. ಅವರು ಮಹಾನ್ ಯೋಗಿಗಳು. ಶೀತ–ಉಷ್ಣ, ಮಾನ–ಅಪಮಾನ, ಹಸಿವು–ಬಾಯಾರಿಕೆ ಯಾವುದರ ಅರಿವೂ ಅವರಿಗಿರುತ್ತಿರಲಿಲ್ಲ. ಅವರಿಗೆ ಅವೆಲ್ಲ ಒಂದೇ ಆಗಿದ್ದವು. ಆರಂಭದಲ್ಲಿ ಅವರು ತುಂಬಾ ಹಠಯೋಗ ಅಭ್ಯಾಸ ಮಾಡಿದ್ದರು. ಗಂಗಾಘಾಟಿನಲ್ಲಿ ಒಬ್ಬಾಕೆ ಬಡ ಮುದುಕಿ ಅವರಿಗೆ ಮಡಕೆ ತುಂಬಾ ಮೊಸರು ಕೊಟ್ಟಿದ್ದಳು. ಬಂದವರಿಗೆ ಅವರು ಒಂದು ಹನಿ ಮೊಸರು ನೀಡುತ್ತಿದ್ದರು, ಅವರು ಇವರಿಗೆ ಹಣ ಕೊಡುತ್ತಿದ್ದರು. ಹೀಗೆ ತುಂಬಾ ಹಣ ಸಂಗ್ರಹವಾಯಿತು. ಆ ಮುದುಕಿಗೆ ಆ ಹಣವೆಲ್ಲ ಲಭಿಸಿತು. ಮತ್ತೊಂದು ದಿನ ದುಷ್ಟನೊಬ್ಬ ಬಹಳ ಹಣ ಗಳಿಸುವ ದುರಾಸೆಯಿಂದ ಅವರ ಬಳಿ ಈ ರೀತಿ ಒಂದು ಮಡಕೆ ಮೊಸರನ್ನಿಟ್ಟ. ತೈಲಂಗಸ್ವಾಮಿಗಳು ತಮ್ಮ ಹತ್ತಿರ ಮೊದಲು ಬಂದವನಿಗೆ ಒಂದು ಪೈಸೆಗೇ ಆ ಮಡಕೆಯನ್ನು ಕೊಟ್ಟುಬಿಟ್ಟರು.''

ಡಿಸೆಂಬರ್ ತಿಂಗಳ ಮಧ್ಯಭಾಗ. ಬಹರಂಪುರದ ಟೋಲ್ (ಸಂಸ್ಕೃತ ಪಾಠಶಾಲೆ) ನಿಂದ ಅಂಧ ಪಂಡಿತರೊಬ್ಬರು ಸ್ವಾಮಿ ಅಖಂಡಾನಂದರ ಪರಿಚಯ ಹೊಂದಲು ಹಾಗೂ ಅವರೊಂದಿಗೆ ಮಾತನಾಡಲು ಬಯಸಿ ಪತ್ರ ಬರೆದಿದ್ದರು. ಅದಕ್ಕೆ ದಿನ ನಿಗದಿ ಪಡಿಸಿ ಅವರಿಗೆ ಉತ್ತರ ಬರೆಯಲಾಯಿತು. ಆ ದಿನ ಸಮಯಕ್ಕೆ ಸರಿಯಾಗಿ ಅವರು ಬಂದರು. ವಿಧಿನಾಥ ಉಪಾಧ್ಯಾಯ ಎಂದು ಅವರ ಹೆಸರು. ಹುಟ್ಟು ಕುರುಡರಾದ ಅವರು, ಇತರರು ಓದಿದ್ದನ್ನು ಕೇಳಿಯೇ ಷಡ್ದರ್ಶನದ ಬಹುಭಾಗವನ್ನು ಕರಗತ ಮಾಡಿಕೊಂಡಿದ್ದರು. ಪರೀಕ್ಷೆಗಳಲ್ಲೂ ಪಾಸಾಗಿದ್ದರು. ಇವರ ಬದಲಾಗಿ ಬೇರೆಯವರು ಬರೆಯುತ್ತಿದ್ದರು. ಆ ಪಂಡಿತರು ಪ್ರಣಾಮ ಮಾಡಿ ಏಳುತ್ತಲೇ, ಮಹಾರಾಜ್ ಬರೆದ ಪತ್ರವನ್ನು ಆದ್ಯಂತವಾಗಿ ಬಾಯಿಪಾಠ ಹೇಳಿದರು. ಬಾಬಾ ಅತ್ಯಂತ ಸಂತೋಷಗೊಂಡು ನೆನಪಿನ ಶಕ್ತಿಯನ್ನು ಕುರಿತು ಒಂದೆರಡು ಕತೆಗಳನ್ನು ಹೇಳಿದರು.

ಮಾತಿನ ನಡುವೆ ವಿಧಿನಾಥ ಪಂಡಿತರು ಅದೇನು ಹೇಳಿದರೊ, ಅದಕ್ಕೆ ಉತ್ತರವಾಗಿ ಬಾಬಾ, 'ನೀನಾದರೋ ಪ್ರಜ್ಞಾಚಕ್ಷು' ಎಂದರು. ಸ್ವಲ್ಪ ಹೊತ್ತಿನ ನಂತರ ವಿಧಿನಾಥರು, 'ತಾವು ನ್ಯಾಯ ಶಾಸ್ತ್ರ ಅಧ್ಯಯನ ಮಾಡಿದ್ದೀರಾ? ನ್ಯಾಯಶಾಸ್ತ್ರವನ್ನು ಅಧ್ಯಯನ ಮಾಡದೆ ವೇದಾಂತವನ್ನು ಅರ್ಥಮಾಡಿಕೊಳ್ಳಲು ಸಾಧ್ಯವೇ ಇಲ್ಲ' ಎಂದರು. ಅದಕ್ಕೆ ಬಾಬಾ, ''ನಾನು 'ನ್ಯಾಯ'ವನ್ನು ಆ ರೀತಿ ಓದಿಲ್ಲಪ್ಪಾ, ವೇದಾಂತವನ್ನು ಸ್ವಲ್ಪವೋ ಅರ್ಥವೋ

ಓದಬೇಕಾಯಿತು. ಎಷ್ಟನ್ನು ಹೇಗೆ ತಿಳಿಸಿಕೊಟ್ಟರೋ, ಅಷ್ಟನ್ನು ತಿಳಿದಿದ್ದೇನೆ. ದರ್ಶನಶಾಸ್ತ್ರ ವ್ಯಾಖ್ಯಾನವೆಲ್ಲ ಶ್ಲೋಕಗಳ ಕೌಶಲ್ಯ, ವಾಕ್ಚಾತುರ್ಯ– **'ವಾಗ್ವೈಖರೀ ಶಬ್ದಝರೀ ಪಂಡಿತಾನಾಂ ಭುಕ್ತಯೇ ನ ತು ಮುಕ್ತಯೇ** ' ಎಂದು ಶಂಕರರೇ ಹೇಳಿದ್ದಾರೆ.''

ಸ್ವಲ್ಪ ನಂತರ ಶಿವನ ಮಾತು ಬಂತು. ವಿಧಿನಾಥ ಪಂಡಿತರು ಶಿವ–ದುರ್ಗೆಯರ ಮಿಲನದ ೪–೫ ಕಲಾತ್ಮಕ ಶ್ಲೋಕಗಳನ್ನು ಹೇಳಿ ವ್ಯಾಖ್ಯಾನ ಮಾಡಿದರು. ಬಾಬಾ ಬಹಳ ಆನಂದದಿಂದ ಕೇಳುತ್ತ, ಒಂದೆರಡನ್ನು ಬರೆದುಕೊಳ್ಳಲು ಹೇಳಿದರು. ಕೊನೆಗೆ ವಿಧಿನಾಥರು, 'ಮತ್ತೆ ಬರುತ್ತೇನೆ, ಮರೆಯಬೇಡಿ. ನಾನೊಬ್ಬನೇ ಬರುವುದು ಸ್ವಲ್ಪ ಕಷ್ಟ' ಎಂದು ಹೇಳಿ ಹೊರಟು ಹೋದರು.

ಕೆಲವು ದಿನಗಳ ನಂತರ ಗಂಗಾತೀರದಲ್ಲಿದ್ದ ಅಗ್ನಿಹೋತ್ರಿ ವೇದ ಶಾಸ್ತ್ರಿ ಎಂಬ ಒಬ್ಬ ಬ್ರಾಹ್ಮಣರು ಬಂದು ವೇದ ಪಾರಾಯಣ ಮಾಡಿ, ತಾವು ಆಶ್ರಮಕ್ಕೆ ಬಂದು ವೇದವನ್ನು ಕಲಿಸಿ ಕೊಡುವುದಾಗಿ ಮಾತಾಯಿತು. 'ಬ್ರಾಹ್ಮಣರಿಗೆ ಮಾತ್ರ ಹೇಳಿಕೊಡುತ್ತೇನೆ, ಆದರೆ ಇತರರು ಕೇಳಿಸಿಕೊಳ್ಳಬಹುದು' ಎಂದು ಅವರೆಂದರು. ಕೊನೆಗೂ ಅವರು ಬರಲಿಲ್ಲ, ಬ್ರಾಹ್ಮಣೇತರರೂ ಕೇಳಿಸಿಕೊಳ್ಳುತ್ತಾರೆಂದೋ ಏನೊ, ಇದನ್ನವರು ಇಷ್ಟಪಡಲಿಲ್ಲ.

**೧ ಜನವರಿ, ೧೯೩೭:** ಭಕ್ತಿ ಹಾಗೂ ಅನ್ನಪೂರ್ಣಾ (ಅಮೆರಿಕನ್ ಭಕ್ತೆಯರು, ಬೇಲೂರು ಮಠದ ನಿರ್ಮಾಣಕ್ಕಾಗಿ ಬಹುಪಾಲು ಆರ್ಥಿಕ ಸಹಾಯ ಮಾಡಿದವರು) ಕೆಲವು ದಿನಗಳ ಮೊದಲೇ ಬಾಬಾಗೆ ಪತ್ರವನ್ನು ಬರೆದಿದ್ದರು. ಬಳಿಕ, 'ಮುಂದಿನ ಜನವರಿ ೧ನೇ ದಿನವನ್ನು ನಾವು ನಿಮ್ಮೊಂದಿಗೆ ಕಳೆಯಬಯಸುತ್ತೇವೆ' ಎಂದು ಟೆಲಿಗ್ರಾಂ ಬಂದಿತ್ತು. ಅವರೊಂದಿಗೆ ಬಾಸ್ಟನ್ ಸ್ವಾಮಿ ಅಖಿಲಾನಂದಜಿಯವರೂ ಬರುತ್ತಾರೆ. ಅನಂಗ ಮಹಾರಾಜ್ (ಸ್ವಾಮಿ ಓಂಕಾರಾನಂದ) ಹಾಗೂ ಹಿರಿಯ ದ್ವಿಜೇನ್ ಮಹಾರಾಜ್ (ಸ್ವಾಮಿ ಗಂಗೇಶಾನಂದ) ಅವರಿಗೂ ಬರಬೇಕೆಂದು ಬಾಬಾ ಬರೆದಿದ್ದರು.

ಅವರನ್ನು ಆದರದಿಂದ ಸ್ವಾಗತಿಸಲು ನಾನಾ ಏರ್ಪಾಡುಗಳು ನಡೆಯುತ್ತಿವೆ. ಕಲ್ಕತ್ತೆಯಿಂದ ಹೂ, ಹಣ್ಣು, ಮಾಲೆಗಳು; ರಸಗುಲ್ಲಾ, ಸಂದೇಶ್ ಇತ್ಯಾದಿ ಭಾರತೀಯ ಸಿಹಿತಿಂಡಿ, ಕೇಕ್, ಬಿಸ್ಕತ್ತು ಮುಂತಾದ ವಿದೇಶಿ ಸಿಹಿತಿಂಡಿಗಳನ್ನು ಸಂಗ್ರಹಿಸುತ್ತಿದ್ದಾರೆ. ಆಶ್ರಮವನ್ನು ಚೊಕ್ಕಟಗೊಳಿಸುತ್ತಿದ್ದಾರೆ– ಎಂಥ ಆನಂದ!

ಜನವರಿ ೧ರಂದು ಮುಂಜಾನೆ ರೈಲ್ವೇ ಹಳಿಯ ಪಕ್ಕದಲ್ಲಿ ಸಲೂನ್ ಗಾಡಿಯೊಂದು ನಿಂತಿತ್ತು. ಅತಿಥಿಗಳನ್ನು ಸ್ವಾಗತಿಸಲು ಬಾಬಾ ಒಬ್ಬರನ್ನು ಕಳುಹಿಸಿ, ತಾವೂ ಹೋಗಲು ಸಿದ್ಧರಾದರು.

ಭಕ್ತಿ, ಅನ್ನಪೂರ್ಣಾ ಹಾಗೂ ಸ್ವಾಮಿ ಅಖಿಲಾನಂದರು ತಲುಪಿದಾಗ ಅವರಿಗೆ ಹೂವಿನ ಹಾರಗಳನ್ನು ಹಾಕಿ ಸ್ವಾಗತಿಸಲಾಯಿತು. ಹಾಲ್‌ನಲ್ಲಿ ಟೇಬಲ್ ಮೇಲೆ ಚಹಾ, ಉಪಾಹಾರಗಳೊಂದಿಗೆ ಸ್ವಾಗತದ ಮೊದಲನೇ ಭಾಗ ಕೊನೆಗೊಂಡಿತು.

ದ್ವಿಜೇನ್ ಮಹಾರಾಜರು ಆಶ್ರಮದವರಿಗೆಲ್ಲ ರಸಗುಲ್ಲಾ ವಿತರಿಸುತ್ತಿದ್ದಾಗ, ಅನಂಗ ಮಹಾರಾಜರು ಅರ್ಜೆಂಟೀನಾದ ಸ್ವಾಮಿ ವಿಜಯಾನಂದ (ಪಶುಪತಿ ಮಹಾರಾಜ್) ರೊಂದಿಗೆ ಬಂದರು. ಬಾಬಾ ಅವರನ್ನು ಕೋಣೆಯೊಳಗೆ ಕರೆದುಕೊಂಡು ಹೋಗಿ ಪ್ರೀತಿಯಿಂದ ತಿನ್ನಿಸಿದ ಬಳಿಕ, 'ನಿನಗೇನು ಬೇಕು, ಹೇಳು' ಎಂದರು. ಆ ದಿನ ಬಾಬಾ ಒಂದು ಹೊಸ ಉಣ್ಣೆಯ ಶಾಲನ್ನು ಹೊದ್ದುಕೊಂಡಿದ್ದರು. ಸ್ವಾಮಿ ವಿಜಯಾನಂದರು ಅದನ್ನು ಕೇಳಿದರು, ತಕ್ಷಣ ಬಾಬಾ ಆ ಶಾಲನ್ನು ಅವರ ಮೈಮೇಲೆ ಹೊದಿಸಿಬಿಟ್ಟರು. ಇಡೀ ಆಶ್ರಮದಲ್ಲಿ ಆನಂದದ ಹೊಳೆ ಹರಿಯುತ್ತಿತ್ತು.

ಸ್ವಾಮಿ ಸತ್ಪ್ರಕಾಶಾನಂದರು ಅಮೆರಿಕಾಗೆ ಹೊರಟಿದ್ದರು; ನಿಂತು ಭಾಷಣ ಮಾಡಬೇಕೆಂದು ಬಾಬಾ ಅವರಿಗೆ ಹೇಳಿದರು. 'ಸ್ಮೃತಿಕಥೆ' ಗಾಗಿ ಬರೆದಿಟ್ಟಿದ್ದ ಶ್ರೀರಾಮಕೃಷ್ಣರ ಜೀವನದ ಕೆಲವು ಭಾಗಗಳನ್ನು ಅನುವಾದ ಮಾಡಿಸಿದ್ದರು; ಅದನ್ನೇ ಎಲ್ಲರ ಮುಂದೆ ಓದಲಾಯಿತು. ಆಹಾರದ ನಂತರ ಎಲ್ಲರೂ ತಿರುಗಾಡುತ್ತಾ ಆಶ್ರಮವನ್ನು ನೋಡಿದರು; ಒಬ್ಬರು ಮರದ ಕೆಳಗೆ, ಮತ್ತೊಬ್ಬರು ತೋಟದಲ್ಲಿ ಬೆಂಚಿನ ಮೇಲೆ ವಿಶ್ರಮಿಸಿದರು. ಸಂಜೆಯ ರೈಲಿನಲ್ಲಿ ಎಲ್ಲರೂ ಹೊರಟುಹೋದರು. ದಿನವಿಡೀ ಆನಂದದಿಂದಿದ್ದ ಬಾಬಾ ತುಂಬಾ ದಣಿದಿದ್ದರು, ಕೊನೆಗೆ ''ಇಂದು ಜನವರಿ ೧, ನಮಗೂ ಶುಭದಿನ– 'ಕಲ್ಪತರು' ದಿವಸ'' ಎಂದರು.

ಕೆಲವು ದಿನಗಳಿಂದ ಹಿರಣ್ಮಯೀ ವರ್ಧನ್ ಆಶ್ರಮದಲ್ಲಿದ್ದರು. ಅವರು ಕುಮಿಲ್ಲಾದ ಡಾ। ಕಾಮಿನೀವರ್ಧನರ ಪತ್ನಿ. ಪತಿ–ಪತ್ನಿಯರದು ಸಂಪೂರ್ಣ ವಿರುದ್ಧ ಮನೋಭಾವ; ಪತಿ ಡಾಕ್ಟರ್, ನಾಸ್ತಿಕರು. ಹಿರಣ್ಮಯೀ ಭಕ್ತೆ, ಸಾಧಕಿ. ಅವರು ಬಾಬಾರ ಚಿತ್ರವನ್ನೇ ಪೂಜಿಸುತ್ತ ಕಾಳಿ, ದುರ್ಗಾ, ಶಿವ, ಕೃಷ್ಣ, ಠಾಕೂರ್, ಶ್ರೀಮಾತೆ ಎಲ್ಲರ ಪೂಜೆಯನ್ನು ಮಾಡುತ್ತಾರೆ. ಬಾಬಾ ಚಿತ್ರಕ್ಕೆ ತಿಲಕವನ್ನೂ ಇಡುತ್ತಾರೆ (ಕಾರ್ತಿಕ ಮಾಸದ ಶುಕ್ಲ ಪಕ್ಷದ ದ್ವಿತೀಯೆಯ ದಿನದಂದು ಬಂಗಾಳ ಸಂಪ್ರದಾಯದ ಪ್ರಕಾರ ಸೋದರಿಯರು ಸೋದರನ ಹಣೆಗೆ ತಿಲಕವನ್ನಿಡುವುದು ಪದ್ಧತಿ.) ಈ ವಿಷಯವನ್ನೊಮ್ಮೆ ಅವರು ಪತ್ರದ ಮೂಲಕ ಬಾಬಾಗೆ ತಿಳಿಸಿದ್ದರು. ಅದನ್ನು ಕೇಳಿದ ಬಾಬಾ, ''ನೋಡಿದೆಯಾ? ಮಾಯೆಯ ಮೂಲಕ ಠಾಕೂರರು ಎಲ್ಲವನ್ನೂ ಮರೆಸಬೇಕೆಂದಿದ್ದಾರೆ'' ಎಂದರು.

ಹಿರಣ್ಮಯೀ ವರ್ಧನರು ಬಾಬಾರನ್ನು ಸಮೀಪಿಸುತ್ತಲೇ ಬಾಬಾ ಅವರನ್ನು ಬೈದು ಠಾಕೂರರ ಮಂದಿರಕ್ಕೆ ಕಳುಹಿಸಿಬಿಟ್ಟರು. ಅಲ್ಲಿ ಅವರು ಅಳುತ್ತ ಕುಳಿತಿದ್ದರು. ಅವರ ಕಣ್ಣುಗಳನ್ನು ನೋಡಿ ಬಾಬಾ, 'ಯೋಗಿಯ ಕಣ್ಣುಗಳು' ಎಂದರು. ಒಂದು ದಿನ ಆಕೆ ಹೂ, ಶ್ರೀಗಂಧಗಳಿಂದ ಬಹಳ ಹೊತ್ತು ಬಾಬಾರ ಪಾದಪದ್ಮಗಳನ್ನು ಪೂಜಿಸಿದರು. ಕೊನೆಗೆ ಅವರು ಬಾಬಾ ಪಾದಗಳನ್ನು ತಲೆಯಮೇಲಿಟ್ಟುಕೊಂಡರು. ಬಾಬಾ ಮೌನವಾಗಿ ಅವರ ಪೂಜೆಯನ್ನು ಸ್ವೀಕರಿಸಿದರು. *(ಮುಂದುವರಿಯುವುದು)*

# ದೀಪಾವಳಿ

**ಅಂತರ್ಜ್ಯೋತಿರ್ಬಹಿರ್ಜ್ಯೋತಿಃ ಪ್ರತ್ಯಗ್‌ಜ್ಯೋತಿಃ ಪರಾತ್ಪರಃ।**
**ಜ್ಯೋತಿರ್ಜ್ಯೋತಿಃ ಸ್ವಯಂಜ್ಯೋತಿರಾತ್ಮಜ್ಯೋತಿಶ್ಶಿವೋಽಸ್ಮ್ಯಹಮ್ ॥**

ಭಾರತದೆಲ್ಲೆಡೆ ಆಚರಿಸುತ್ತಿರುವ ದೀಪಾವಳಿ ಹಬ್ಬದ ವಿವಿಧ ಆಚರಣೆಗಳು, ಅವುಗಳ ಪೌರಾಣಿಕ ಹಿನ್ನೆಲೆ, ಅವುಗಳ ಹಿಂದಿರುವ ಆಧ್ಯಾತ್ಮಿಕ ಅರ್ಥ ಇವುಗಳನ್ನು ಶಾಸ್ತ್ರಗಳ ಹಿನ್ನೆಲೆಯಲ್ಲಿ ವಿವರಿಸಿರುವ ಲೇಖಕಿ, ನಿವೃತ್ತ ಪ್ರಾಂಶುಪಾಲರು ಹಾಗೂ ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು.

**ಡಾ. ಕೆ.ಎಲ್. ಪ್ರಸನ್ನಾಕ್ಷೀ**

**ಜ್ಯೋ**ತಿಗೆ ಜ್ಯೋತಿಯಾಗಿ ಬೆಳಗುವ ಸ್ವಯಂಪ್ರಭೆಯ ರೂಪ ನಮ್ಮದೆಂದು ಅರಿತು, '**ವೇದಾಹಮೇತಂ ಪುರುಷಂ ಮಹಾಂತಂ ಆದಿತ್ಯ ವರ್ಣಂ..**' ಸೂರ್ಯನಂತೆ ಬೆಳಗುತ್ತಿರುವ ಆ ಪರಮ ಪುರುಷನನ್ನು ನಾನು ಬಲ್ಲೆ – ಎಂದು ಘಂಟಾಘೋಷವಾಗಿ ಸಾರಿದ ಮಹಿಮೋನ್ನತರ ನಾಡು, ಪರಂಪರೆ ನಮ್ಮದು. ಅಂತಹ ಬೆಳಕನ್ನು ಪಡೆಯುವುದೇ ಸೃಷ್ಟಿಯಲ್ಲಿ ಸೃಷ್ಟವಾದ ಸಕಲ ಜೀವಿಗಳ ಹಕ್ಕು ಮತ್ತು ಕರ್ತವ್ಯ. ಆದುದರಿಂದಲೇ ಹುಟ್ಟಿದ ಜೀವವು ಭೌತಿಕ (ಶಾರೀರಿಕ), ಬೌದ್ಧಿಕ, ಮಾನಸಿಕ, ಆರ್ಥಿಕ, ಸಾಮಾಜಿಕ ನೆಲೆಗಳಲ್ಲಿ ಅಭಿವೃದ್ಧಿಯನ್ನು ಹೊಂದಲು ಅಗತ್ಯವಾದ ಶಾಸ್ತ್ರ-ತತ್ತ್ವ ವಿಚಾರಗಳನ್ನು ನಮ್ಮ ಮಹರ್ಷಿಗಳು ಕರುಣಿಸಿದ್ದಾರೆ. ಅಷ್ಟೇ ಅಲ್ಲದೆ ಈ ಎಲ್ಲಕ್ಕೂ ಅತೀತವಾದ ಮತ್ತೊಂದು ಅಭಿವೃದ್ಧಿಯನ್ನೂ ಅವರು ಗಮನಿಸಿದ್ದಾರೆ. ಆ ಅನುಭವವನ್ನು ಪಡೆಯಿರಿ, ಆನಂದ-ಪರಮಾನಂದ-ಬ್ರಹ್ಮಾನಂದ ನೆಲೆಯಲ್ಲಿ ನಿಲ್ಲಿರಿ ಎಂದು '**ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾಃ...**' , '**ಅಗ್ನಿಮಿಚ್ಛಧ್ವಂ ಭಾರತಾಃ ...**' ಎಂದು ನಮ್ಮ ಋಷಿಗಳು ಸಾರಿ ಹೇಳಿದ್ದಾರೆ. ಇಂತಹ ಗುರಿಯನ್ನು ಸಾಧಿಸುವ ಸಾಧನೆಯ ಹಂತ (ಪರ್ವ)ಗಳಲ್ಲಿ 'ಹಬ್ಬ'ಗಳೂ ಒಂದು. ಭಾರತದಲ್ಲಿ ಇಂತಹ ಹಬ್ಬಗಳಿಂದ ಮನೆಮನೆಗಳಲ್ಲಿಯೂ ಸಡಗರ, ಸಂಭ್ರಮ, ಆನಂದೋಲ್ಲಾಸಗಳಿಂದ ನಿತ್ಯಸುಮಂಗಳ ನಿತ್ಯಮಹೋತ್ಸವ. ಇಂತಹ ಹಬ್ಬಗಳ ಸಾಲಿನಲ್ಲಿ '**ದೀಪಾವಳೀ**' ಹಬ್ಬವೂ ಒಂದು.

ಲೋಕವನ್ನೆಲ್ಲಾ ಬೆಳಗುವ (ಸೂರ್ಯ ಚಂದ್ರ ಅಗ್ನಿ ನಕ್ಷತ್ರಾದಿ) ಎಲ್ಲಾ ಜ್ಯೋತಿಗಳಿಗೂ ಜ್ಯೋತಿಯಾದ, ಪರಮ ಜ್ಯೋತಿಯಾದ, ಕಲೆಗಳಿಲ್ಲದ (ನಿಷ್ಕಲ) ಸಕಲಕಲಾಪರಿಪೂರ್ಣವಾಗಿ, ಕಳಂಕರಹಿತ (ನಿರಂಜನ)ವಾಗಿ, ಯಾವುದೇ ಬದಲಾವಣೆಗಳಿಲ್ಲದೆ ಸದಾ ಏಕರೂಪವಾಗಿ ಭಾಸವಾಗುವ (ನಿರ್ವಿಕಲ್ಪ) ಏಕೈಕ ಬೆಳಕಿಗೆ ನಮೋ ನಮಃ! ಯಾವುದೇ ದಿಕ್ಕು, ಯಾವುದೇ ದೇಶವಿರಲಿ, ಅಲ್ಲಿ ಹಚ್ಚಿಟ್ಟ 'ದೀಪ'ದ ಸ್ವರೂಪ ಒಂದೇ. ಮತ್ತು ಆ 'ದೀಪ'ದಿಂದ ನೂರು, ಸಾವಿರ, ಹತ್ತುಸಾವಿರ, ಲಕ್ಷ... ಹೀಗೆ ಅಸಂಖ್ಯ ದೀಪಗಳನ್ನು ಹಚ್ಚಿದರೂ ಆ 'ದೀಪ'ದ ಕಾಂತಿ ಎಷ್ಟಿತ್ತೋ ಅಷ್ಟೇ ಇರುತ್ತದೆ; ಸ್ವಲ್ಪವೂ ಕುಗ್ಗುವುದಿಲ್ಲ. ಇಂತಹ ವಿಶಿಷ್ಟತಮವಾದ 'ದೀಪ'ಕ್ಕೆ ಸಂಬಂಧಿಸಿದ ಹಬ್ಬ ದೀಪಾವಳಿ. ಇದು ದಕ್ಷಿಣಾಯನದಲ್ಲಿ ಆಶ್ವಯುಜ ಮಾಸದ ಕೃಷ್ಣಪಕ್ಷದ ತ್ರಯೋದಶಿಯಿಂದ, ಕಾರ್ತಿಕ ಶುದ್ಧ ಬಿದಿಗೆಯವರೆಗೆ ಆಚರಿಸಲ್ಪಡುತ್ತದೆ.

ಈ ದಿನಗಳಲ್ಲಿ ಮನೆ, ದೇವಾಲಯ, ಮಠ, ಚೌಕ – ಹೀಗೆ ಎಲ್ಲೆಡೆ ದೀಪ ಬೆಳಗಿಸುವ ಪದ್ಧತಿ ಇದೆ. ಮನೆಯ ಅಂಗಳದಲ್ಲಿ ಸಾಧಾರಣ ಮಾನವನಷ್ಟು ಎತ್ತರದ ಸ್ಥಂಭ ಸ್ಥಾಪಿಸಿ, ಅದರ ಮೇಲೆ ಅಷ್ಟಕೋನದ ಆಕೃತಿ ಇರಿಸಿ, ಆ ಎಲ್ಲಾ ಕೋನಗಳಿಂದ ದೀಪಜ್ವಾಲೆ ಹೊರಬರುವಂತೆ ಆಕಾಶದೀಪಗಳನ್ನು ಹಚ್ಚುವ ತಾತ್ತ್ವಿಕ ಹಿನ್ನೆಲೆಯುಳ್ಳ ಪದ್ಧತಿಯೂ ಅಲ್ಲಲ್ಲಿ ಇದೆ. ಇಷ್ಟೇ ಅಲ್ಲದೆ ಬಾಣ ಬಿರುಸು ಮದ್ದು ಪಟಾಕಿಗಳ ಬೆಳಕೂ ಇವುಗಳೊಡನೆ ಸೇರುತ್ತದೆ; ಹೀಗೆ ಎಲ್ಲೆಲ್ಲೂ ಬೆಳಕು ದೀಪಮಯವಾಗಿ ಸಂಪೂರ್ಣ ವಾತಾವರಣವನ್ನೇ ಪ್ರಕರ್ಷಮಾನವಾಗಿ ಬೆಳಗುತ್ತಿರುವ ಕಾರಣ 'ದೀಪಾವಳಿ' ಎಂದು ಅನ್ವರ್ಥವಾದ ಹಬ್ಬವಿದು.

ಈ ಹಬ್ಬದ ಆಚರಣೆ, ವಿಧಿ-ವಿಧಾನಗಳನ್ನು ಕುರಿತು, ಸ್ಕಾಂದ ಪುರಾಣದ ಕಾಶೀಖಂಡ, ಬ್ರಹ್ಮಾಂಡಪುರಾಣ, ಪದ್ಮಪುರಾಣ, ಗರುಡ ಪುರಾಣ, ಮಹಾಭಾರತ ಮುಂತಾದ ಗ್ರಂಥಗಳಲ್ಲಿ ಮಾಹಿತಿಗಳಿವೆ.

**ನೀರು ತುಂಬುವ ಹಬ್ಬ:** ತ್ರಯೋದಶಿಯ ದಿನ ಸ್ನಾನದ ಮನೆಯ ಹಂಡೆ, ಪಾತ್ರೆ, ಪಡಗಗಳನ್ನೆಲ್ಲಾ ಶುದ್ಧಮಾಡಿ, ಒಲೆ ಹಂಡೆಗಳನ್ನೂ ರಂಗವಲ್ಲಿಯಿಂದ ಅಲಂಕರಿಸಿ, ಅವುಗಳಲ್ಲಿ ಶುದ್ಧ ನೀರು ತುಂಬಿಸಬೇಕು. ಆಹ್ವಾನಿತರಾದ ಬಂಧು-ಬಾಧವರೊಡನೆ ಸಿಹಿ ಊಟ ಮಾಡಿ ರಾತ್ರಿ ವಿಶ್ರಮಿಸಬೇಕು. ಅಂದು ಯಮದೇವರ ಪ್ರೀತಿಗಾಗಿ, ಅಪಮೃತ್ಯು ನಿವಾರಣೆಗಾಗಿ ಮನೆಯ ಹೊರಗಡೆ ದೀಪ ಹಚ್ಚಿ,

**ಮೃತ್ಯುನಾ ಪಾಶದಂಡಾಭ್ಯಾಂ ಕಾಲೇನ ಶ್ಯಾಮಯಾ ಸಹ ।**
**ತ್ರಯೋದಶ್ಯಾಂ ದೀಪದಾನಾತ್ ಸೂರ್ಯಜಃ ಪ್ರೀಯತಾಂ ಮಮ॥**

– ಎಂದು ಪ್ರಾರ್ಥಿಸಬೇಕು.

**ನರಕ ಚತುರ್ದಶಿ:** ಚತುರ್ದಶಿಯ ದಿನ ಎಲ್ಲರೂ ಅಭ್ಯಂಗ (ಎಣ್ಣೆ ಸ್ನಾನ) ವನ್ನು ಮಾಡಬೇಕು. ಈ ದಿನದಂದು ಸಂನ್ಯಾಸಿಗೂ ಅಭ್ಯಂಗವನ್ನು ಶಾಸ್ತ್ರಗಳು ಹೇಳುವುದನ್ನು ಗಮನಿಸಿದಾಗ– 'ಉಂಡ ದಿನ ಉಗಾದಿ, ಮಿಂದ ದಿನ ದೀವಳಿಗೆ' – ಎಂಬ ನಾಣ್ನುಡಿಯ ಸತ್ಯತೆ, ಅಭ್ಯಂಗದ ಪ್ರಾಶಸ್ತ್ಯ ನಮ್ಮ ಅರಿವಿಗೆ ಬರುತ್ತದೆ. ಯಮಧರ್ಮರಾಯನನ್ನು ಸಾಲಿಗ್ರಾಮ ಜಲಕಲಶಗಳಲ್ಲಿ ಆವಾಹಿಸಿ ಷೋಡಶೋಪಚಾರಗಳಿಂದ ಪೂಜಿಸಬೇಕು. **ಯಮ-ಧರ್ಮರಾಜ-ಮೃತ್ಯು-ಅಂತಕ-ವೈವಸ್ವತ-ಕಾಲ-ಸರ್ವಭೂತಕ್ಷಯ-ಔದುಂಬರ-ದಧ್ನ-ನೀಲ-ಪರಮೇಷ್ಠೀ-ವೃಕೋದರ-ಚಿತ್ರ-ಚಿತ್ರಗುಪ್ತ** ಎಂಬ ಹದಿನಾಲ್ಕು ನಾಮಗಳನ್ನು ಉಚ್ಚರಿಸುತ್ತಾ ತಿಲತರ್ಪಣ ನೀಡಬೇಕು.

ಆಮೇಲೆ ನರಕಾಂತಕ ನಾರಾಯಣನನ್ನು ಧ್ಯಾನಿಸುತ್ತಾ ಆತನನ್ನು ಷೋಡಶೋಪಚಾರಗಳಿಂದ ಪೂಜಿಸಬೇಕು. ಜೀವ ಸಾರ್ಥಕ್ಯಕರವಾದ ಭಗವಂತನನ್ನು ಹೊಂದಲು ಇರುವ ಅತ್ಯಂತ ಸುಲಭೋಪಾಯ – ಭಗವಂತನ ಲೀಲಾವತಾರಗಳನ್ನು, ಅವನ ವಿವಿಧ ಲೋಕಹಿತ ಲೀಲೆಗಳನ್ನು ನೆನಪಿಸಿಕೊಳ್ಳುತ್ತಿರುವುದು, ಗದ್ಗದಕಂಠದಿಂದ ಅವನನ್ನು ಮನಃಪೂರ್ವಕವಾಗಿ ಕೀರ್ತನೆ ಮಾಡುವುದು, ಅವನ ಸತ್ಕಥೆಗಳನ್ನು ಸಜ್ಜನರಿಂದ, ಮಹಾತ್ಮರಿಂದ ಕೇಳುವುದು – ಎಂದು ಶ್ರೀಮದ್ಭಾಗವತ ಸಾರಿ ಹೇಳುತ್ತದೆ. ಈ ಹಿನ್ನೆಲೆಯಲ್ಲಿ ಭಗವಂತನು ಮಾಡಿದ ನರಕವಧೆಯನ್ನು ಅಂದು ನೆನೆಪಿಸಿಕೊಳ್ಳುವುದು ಸೂಕ್ತವೇ ಆಗುತ್ತದೆ.

ನರಕನ ಊರು ಪ್ರಾಗ್ಜ್ಯೋತಿಷ, (ಹಿಂದೆ ಅದೂ ಜ್ಯೋತಿರ್ಮಯವೇ ಆಗಿದ್ದು ನರಕನ ಬಲ, ದರ್ಪ, ಅಹಂಕಾರದ ಮದದಿಂದ, ಧರ್ಮಮೀರಿದ ನಡತೆಯ ಕಾರಣ ಅದು ಅಳಿಸಿಹೋಯಿತು.) ಅದನ್ನು ಅವನು ಗಿರಿದುರ್ಗ ಜಲದುರ್ಗ ಶಸ್ತ್ರ ದುರ್ಗ ವಾಯುದುರ್ಗ ಮೊದಲಾದ ದುರ್ಗಗಳಿಂದಲೂ, ಮುರ ಪಾಶ ಮೊದಲಾದ ಪಾಶಗಳಿಂದಲೂ ಸುರಕ್ಷಿತವಾಗಿ ಮಾಡಿಕೊಂಡಿದ್ದ. ಈತ ಮದಾಂಧನಾಗಿ ದೇವತೆಗಳ ತಾಯಿಯಾದ ಅದಿತಿಯ ಬೆಂಡೋಲೆಗಳನ್ನೂ, ದೇವತೆಗಳ ವಿಹಾರಕ್ಷೇತ್ರವಾದ ಉಪವನವನ್ನೂ, ವರುಣನ ಬೆಳ್ಗೊಡೆ ಮೊದಲಾದವನ್ನು ಅಪಹರಿಸಿದ್ದೇ ಅಲ್ಲದೆ, ದೇವತೆಗಳಿಗೆ ಪದೇ ಪದೇ ಅನೇಕ ರೀತಿಯ ತೊಂದರೆಯನ್ನು ಉಂಟು ಮಾಡುತ್ತಿದ್ದನು. ದೇವತೆಗಳು ಈತನ ಬಾಧೆ ತಾಳಲಾರದೆ ಕೃಷ್ಣನ ಮೊರೆಹೊಕ್ಕರು. ಕೃಷ್ಣನು ತನ್ನ ಪತ್ನಿ ಸತ್ಯಭಾಮೆಯೊಡಗೂಡಿ ವೇದಾತ್ಮನಾದ ಗರುಡನ ಮೇಲೇರಿ ನರಕನ ನಗರಿಗೆ ಬಂದ. ತನ್ನ ಚಕ್ರ, ಗದೆಗಳ ಸಹಾಯದಿಂದ ಅವನ ಸುರಕ್ಷಿತ ಕೋಟೆಗಳನ್ನೆಲ್ಲಾ ಕತ್ತರಿಸಿ ಹಾಕಿದ. ಮುರಪಾಶ ಮತ್ತು ಕೃತಕಯಂತ್ರಗಳನ್ನೆಲ್ಲಾ ತನ್ನ ಶಂಖದಿಂದ ನಿಷ್ಕ್ರಿಯವನ್ನಾಗಿ ಮಾಡಿದ; ಸಿಟ್ಟಿನಿಂದ ತನ್ನ ಮೇಲೆ ಆಕ್ರಮಣ ಮಾಡಿದ ಮುರನೆಂಬ ರಾಕ್ಷಸನನ್ನು ಕೊಂದುಹಾಕಿದ. ಆಗ ತನ್ನನ್ನು ಎದುರಿಸಿ ದೀರ್ಘಕಾಲ ಯುದ್ಧ ಮಾಡಿದ ನರಕಾಸುರನೊಡನೆ ಹೋರಾಡಿ ಅವನನ್ನು ನಾಶಮಾಡಿದ. ಅದಿತಿಯ ಕುಂಡಲಗಳನ್ನೂ ದೇವಲೋಕದ ಉದ್ಯಾನವನ, ವೈಜಯಂತಿಯನ್ನೂ ವರುಣನ ಛತ್ರಿ, ಮಣಿಗಳನ್ನೂ ಕೃಷ್ಣ ಅವರವರಿಗೆ ತಲುಪಿಸಿದ. ಅವನು ಸೆರೆಯಲ್ಲಿಟ್ಟಿದ್ದ ೧೬,೦೦೦ ಮಂದಿ ರಾಜಕುಮಾರಿಯರನ್ನೂ ಅವರ ಪ್ರಾರ್ಥನೆಯ ಮೇರೆಗೆ ವಿವಾಹವಾಗಿ ಸಂರಕ್ಷಿಸಿದ.

ಹೀಗೆ ಯೋಗೇಶ್ವರನಾದ, ಅನಾದಿಬ್ರಹ್ಮಚಾರಿಯಾದ ಕೃಷ್ಣನು ಪರಬ್ರಹ್ಮವೇ ಪುರುಷಾಕಾರವನ್ನು ತಾಳಿ ಬಂದಿದ್ದ. ಹೊರಜೀವನದಲ್ಲಿ ನಾನಾ ಚಟುವಟಿಕೆಗಳಲ್ಲಿ ತೊಡಗಿದ್ದರೂ, ಆ ಯಾವ ಚಟುವಟಿಕೆಗಳಿಗೂ, ಅದರಿಂದ ಬರುವ ಯಾವ ರೀತಿಯ ಫಲಗಳಿಗೂ ಕಿಂಚಿತ್ತೂ ಅಂಟಿಕೊಳ್ಳದೆ ಸದಾ ಬ್ರಹ್ಮಭಾವದಲ್ಲಿ ಇರುತ್ತಿದ್ದವನು ಪುರುಷೋತ್ತಮ. ಭಗವಂತನ ಈ ಭಾವವನ್ನು ಸ್ಮರಿಸುವುದು, ಕೀರ್ತಿಸುವುದು ಧ್ಯಾನಿಸುವುದು ಜೀವಕ್ಕೆ ಶ್ರೇಯಃಕಾರಕ. ಇದು ಈ ದಿನದ ವೈಶಿಷ್ಟ್ಯ.

ಈ ಭಗವದ್ಭಾವದ ಸ್ಮರಣೆಯೊಂದಿಗೆ ಮನೆಯ ಒಳಗೆ, ಹೊರಗೆ, ಹಾಗೂ ಎಲ್ಲಾ ಜಾಗಗಳಲ್ಲಿ ದೀಪಗಳನ್ನು ಹಚ್ಚಿ , 'ನರಕಾಂತಕನು ನಮಗೆ ಆರೋಗ್ಯ ಶಾಂತಿ ನೆಮ್ಮದಿಗಳನ್ನಿತ್ತು ನಮ್ಮನ್ನು ನರಕದಿಂದ ಪಾರುಮಾಡಲಿ' ಎಂದು ಪ್ರಾರ್ಥಿಸಿಕೊಳ್ಳಬೇಕು. ಆಮೇಲೆ ವಿಷ್ಣು, ಶಿವ, ರಾತ್ರಿದೇವತೆಯರನ್ನೂ ಪೂಜಿಸಬೇಕು.

**ಓಂ ನಮಃ ಪಿತೃಭ್ಯಃ ಪ್ರೇತೇಭ್ಯೋ ನಮೋ ಧರ್ಮಾಯ ವಿಷ್ಣವೇ।**
**ನಮೋ ಧರ್ಮಾಯ ರುದ್ರಾಯ ಕಾಂತರಪತಯೇ ನಮಃ ॥**

– ಎಂಬ ಮಂತ್ರ ಹೇಳುತ್ತಾ ಕೊಳ್ಳಿ ಅಥವಾ ಉರಿಯುತ್ತಿರುವ ದೊಂದಿಯನ್ನು ಆಕಾಶದ ಕಡೆಗೆ ಹಿಡಿದು,

**ಓಂ ಅಗ್ನಿದಗ್ಧಾಶ್ಚ ಯೇ ಜೀವಾ ಯೇಽಪ್ಯದಗ್ಧಾಃ ಕುಲೇ ಮಮ।**
**ಉಜ್ಜ್ವಲಜ್ಯೋತಿಷಾ ದಗ್ಧಾಸ್ತೇ ಯಾಂತು ಪರಮಾಂ ಗತಿಂ॥**

– 'ಅಗ್ನಿಸಂಸ್ಕಾರ ಹೊಂದಿದವರು, ಹೊಂದದವರು ಯಾವುದೇ ಮೃತಜೀವ ನಮ್ಮ ಕುಲದಲ್ಲಿದ್ದರೆಯೋ ಅದು ಈ ಉಜ್ಜ್ವಲಜ್ಯೋತಿಯಿಂದ ಸಂಸ್ಕಾರವನ್ನು ಹೊಂದಿ ಪರಮಗತಿಯನ್ನು ಪಡೆಯಲಿ' ಎಂದು ಪ್ರಾರ್ಥಿಸಬೇಕು.

**ಸುಖರಾತ್ರಿಕಾ – ಲಕ್ಷ್ಮೀಪೂಜೆ:** ಹಗಲಿನಲ್ಲಿ ಚತುರ್ದಶಿಯಿದ್ದು ರಾತ್ರಿ ಅಮಾವಾಸ್ಯೆಯಿದ್ದ ದಿನವನ್ನು 'ಸುಖ-ರಾತ್ರಿಕಾ' ಎನ್ನುತ್ತಾರೆ. ಅಂದು ಮನೆಯ ಮಧ್ಯದಲ್ಲಿ ಉತ್ತರಾಭಿಮುಖವಾಗಿ ಲಕ್ಷ್ಮೀದೇವಿಯನ್ನು ಸ್ಥಾಪಿಸಿ, ಆಕೆಗೆ ಅರ್ಘ್ಯಪಾದ್ಯ ಆಚಮನೀಯ ಮೊದಲಾದವುಗಳನ್ನಿತ್ತು ಪೂಜಿಸಬೇಕು.

**ಕುಬೇರನ ಪೂಜೆ:** ಇದೇ ದಿನ ರಾತ್ರಿ ಕುಬೇರನನ್ನು ಕಲಶದಲ್ಲಿ ಆವಾಹಿಸಿ, ಆತನಿಗೂ ಅರ್ಘ್ಯಪಾದ್ಯಾದಿ ಷೋಡಶೋಪಚಾರ ಪೂಜೆ ಸಲ್ಲಿಸಬೇಕು.

**ಅಗ್ನಿಜ್ಯೋತೀ ರವಿಜ್ಯೋತಿಶ್ಚಂದ್ರಜ್ಯೋತಿಸ್ತಥೈವ ಚ।**
**ಉತ್ತಮಃ ಸರ್ವಜ್ಯೋತೀನಾಂ ದೀಪೋಽಯಂ ಪ್ರತಿಗೃಹ್ಯತಾಂ॥**

'ಅಗ್ನಿ ರವಿ ಚಂದ್ರ ಮೊದಲಾದ ಎಲ್ಲ ಜ್ಯೋತಿಗಳಿಗಿಂತ ಉತ್ತಮವಾದ ಈ ದೀಪಜ್ಯೋತಿಯನ್ನು ಸ್ವೀಕರಿಸು' ಎಂದು ಆತನಿಗೆ ದೀಪವನ್ನು ಬೆಳಗಬೇಕು. ಮತ್ತು ಬಂಧುಬಾಂಧವರಿಗೂ, ಬ್ರಾಹ್ಮಣರಿಗೂ ಊಟ ಹಾಕಿ ತಾನೂ ಊಟ ಮಾಡಬೇಕು.

ಹೀಗೆ ಸುಖರಾತ್ರಿರೂಪಳಾದ ಮಹಾಲಕ್ಷ್ಮಿಯನ್ನು ಪೂಜಿಸಿ, 'ವರ್ಷಾಕಾಲದಲ್ಲಿ ಯಾವರೀತಿ ಪಾಪಗಳು, ಅಪರಾಧಗಳು ನನ್ನಿಂದ ಆಚರಿತವಾಗಿವೆಯೋ, ಆ ಎಲ್ಲವನ್ನೂ ದೇವಿ, ಪರಿಹರಿಸು' ಎಂದು ಪುಷ್ಪಾಂಜಲಿಯೊಡನೆ ಪ್ರಾರ್ಥಿಸಬೇಕು.

**ಬಲಿಪಾಡ್ಯಮಿ :** ಪಾಡ್ಯದ ದಿನ – ಬಲಿಯನ್ನು ಉದ್ಧರಿಸಿದ ಭಗವಂತನ ಲೀಲೆಯನ್ನು ಸ್ಮರಿಸಿ ಕೀರ್ತಿಸಬೇಕು. ಪ್ರಹ್ಲಾದನ ವಂಶದಲ್ಲಿ ಜನಿಸಿದ ಈತ ದೈವೀಗುಣಸಂಪನ್ನ ಭಗವದ್ಭಕ್ತ, ಅನೇಕ ಯಜ್ಞಯಾಗಾದಿಗಳನ್ನು ಮಾಡಿ ಸ್ವೇಚ್ಛೆಯಾಗಿ ದಾನ, ದಕ್ಷಿಣೆಗಳನ್ನು ನೀಡಿದ ವೀರ. ಇದೇ ಆತನಲ್ಲಿ ಮದವಾಗಿ ಪರಿವರ್ತಿತವಾಗಿ, ಈ ಮದದಿಂದ ಆತ ಸ್ವರ್ಗಾದಿ ಲೋಕಗಳನ್ನೆಲ್ಲಾ ಆಕ್ರಮಣ ಮಾಡಿ, ದೇವತೆಗಳನ್ನೆಲ್ಲಾ ಬೀದಿಪಾಲು ಮಾಡಿ, ತ್ರಿಲೋಕಾಧಿಪತಿಯಾಗಿ ಮೆರೆಯುತ್ತಾನೆ. ಭಗವಂತ 'ವಾಮನ'ನಾಗಿ ಜನಿಸಿ ಉಪನೀತನಾಗಿ ಬಲಿಯು ಯಜ್ಞಮಾಡುತ್ತಿದ್ದ ಯಜ್ಞವೇದಿಕೆಯ ಬಳಿಗೆ ಬರುತ್ತಾನೆ. ತನ್ನ ಗುರು ಶುಕ್ರಾಚಾರ್ಯರು ಎಚ್ಚರಿಸಿದ್ದರೂ, ಅವರ ಆಜ್ಞೆ ಮೀರಿ

ದಾನದ ಮದದಿಂದ ಮೆರೆಯುತ್ತಿದ್ದ ಬಲಿಯು ದಾನ ಮಾಡಲು ಎರೆದ ನೀರಧಾರೆ ಅವನ ಪಾದ ಸೋಕುತ್ತಿರುದ್ದಂತೆ, ವಾಮನ ತ್ರಿವಿಕ್ರಮನಾಗಿ ಬೆಳೆದ. ತನ್ನ ಎರಡು ಹೆಜ್ಜೆಗಳಿಂದ ಭೂಲೋಕ ಸ್ವರ್ಗಲೋಕಗಳನ್ನು, ಮೂರನೆಯ ಹೆಜ್ಜೆಯನ್ನು ಬಲಿ ತೋರಿದ ಅವನ ತಲೆಯ ಮೇಲೇ ಇರಿಸಿದ. ತಮ್ಮಿಂದಲೇ ದಾನ ಬೇಡಿ ಪಡೆದು ಈ ರೀತಿ ಕೃತಘ್ನನಂತೆ ವ್ಯವಹರಿಸುತ್ತಿರುವ ಭಗವಂತನ ನಡೆಯ ಔಚಿತ್ಯವನ್ನು ಬಲಿಯ ಪತ್ನಿ ವಿಂಧ್ಯಾವಳೀ ಪ್ರಶ್ನಿಸುತ್ತಾಳೆ. ಆಗ ಭಗವಂತ, 'ನನ್ನ ಅನುಗ್ರಹಕ್ಕೆ ಪಾತ್ರರಾದವರಿಗೆ ಕುಲ, ರೂಪ, ವಿದ್ಯೆ ಅಧಿಕಾರ, ಧನ ಮೊದಲಾದ ಮದಗಳು ಇರದಂತೆ ಮಾಡುತ್ತೇನೆ. ನಿಮ್ಮನ್ನು ಅನುಗ್ರಹಿಸಲಿಕ್ಕಾಗಿಯೇ ಪರೀಕ್ಷೆ. ಗುರು ಬೇಡವೆಂದು ತಡೆದರೂ ಆಡಿದ ಮಾತಿನಂತೆ ನಡೆದ ಈತನ ಸತ್ಯನಿಷ್ಠೆಗಾಗಿ ಈತನಿಗೆ ಸುತಲ ಲೋಕದ ಆಧಿಪತ್ಯವನ್ನು ಕರುಣಿಸಿದ್ದೇನೆ. ಮುಂದೆ ಸಾವರ್ಣಿ ಮನ್ವಂತರದಲ್ಲಿ ಈತನಿಗೆ ದೇವೇಂದ್ರ ಪದವಿಯನ್ನೂ ಕರುಣಿಸುವೆನು. ಅಷ್ಟೇ ಅಲ್ಲದೆ ಸದಾಕಾಲ ಅವನಿಗೆ ನನ್ನ ದರ್ಶನಭಾಗ್ಯವನ್ನೂ ಕರುಣಿಸುವೆನು' ಎಂದನು.

ಭಗವಂತನ ಈ ಕೃಪಾನುಗ್ರಹವನ್ನು ಸ್ಮರಿಸುತ್ತಾ ಪತ್ನಿ ವಿಂಧ್ಯಾವಳಿ ಸಹಿತ ಬಲೀಂದ್ರನ ಚಿತ್ರವನ್ನೂ ಬರೆದು, ಬಾಣ ಕೂಷ್ಮಾಂಡ ಮುರ ಮೊದಲಾದ ಅವನ ಪರಿವಾರದವರನ್ನೂ ಕಲ್ಪಿಸಿ ಕೋಟೆ (ರಂಗವಲ್ಲಿಯಲ್ಲಿ) ಕಟ್ಟಬೇಕು. ಕೆಲವರು ಗೋಮಯದಿಂದ ಉಂಡೆ ಮಾಡಿ ಅದಕ್ಕೆ ಚೆಂಡು, ಸೇವಂತಿಗೆ ಹೂಗಳನ್ನು ಸಿಕ್ಕಿಸಿ ಅಲಂಕರಿಸುವ ಪದ್ಧತಿಯೂ ಇದೆ. ಬಲೀಂದ್ರನಿಗೂ ಕಲಶದಲ್ಲಿ ಆವಾಹಿತನಾದ ವಿಷ್ಣುವಿಗೂ ಷೋಡಶೋಪಚಾರ ಪೂಜೆ ಮಾಡಬೇಕು. ಆ ದಿನ ಸಂಜೆ ಮುರೂಮುಕ್ಕಾಲು ಘಳಿಗೆಗಳ ಕಾಲ ಬಲೀಂದ್ರನ ಅಧಿಕಾರ. ಬಲೀಂದ್ರನ ರಾಜ್ಯದಲ್ಲಿ ಹಾಲು ಹಳ್ಳವಾಗಿ ಹರಿಯುತ್ತದೆ. ಬೆಣ್ಣೆ ಬೆಟ್ಟದಷ್ಟು ರಾಶಿ, ಕಲ್ಲುಗಳೆಲ್ಲ ಚಿನ್ನ, ಹುಲ್ಲುಗಳೆಲ್ಲಾ ಮೃಷ್ಟಾನ್ನವಾಗಿ ಇರುತ್ತದೆ ಎಂಬುದು ನಂಬಿಕೆ. ಬಲೀಂದ್ರನ ಕೃಪೆಯಿಂದ ಇಂತಹ ಸಮೃದ್ಧಿ ನಮ್ಮದಾಗಲಿ ಎಂದು ಪ್ರಾರ್ಥಿಸಬೇಕು. ಈ ಸಮಯದಲ್ಲೇ ಕೆಲವು ಕುಟುಂಬಗಳಲ್ಲಿ ಕಲಶದ ಬಳಿ ಸ್ಥಾಪಿಸಿದ ಕನ್ನಡಿಯ ಮೆಲೆ ಉದ್ದಿನಕಾಳನ್ನು ಉರುಳಿಸುವ ಪದ್ಧತಿಯೂ ಇದೆ. ಅಷ್ಟು ಕಾಲ ಬಲೀಂದ್ರನ ಅಧಿಕಾರವಿರುವುದು. ಆಗ ಅವನನ್ನು ಸ್ವಾಗತಿಸಲು ಮನೆಯನ್ನೆಲ್ಲಾ ದೀಪಗಳ ಜ್ಯೋತಿಯಿಂದ ಬೆಳಗುತ್ತಾರೆ. ಆತನ ಆಗಮನದ ಆನಂದದ ಸೂಚಕವಾಗಿ ಬಾಣ ಬಿರುಸು ಪಟಾಕಿಗಳನ್ನು ಹಚ್ಚುತ್ತಾರೆ.

ಸ್ಥಾನಮಾನ ಅಹಂಕಾರಗಳನ್ನೆಲ್ಲಾ ಭಗವಂತನಿಗೆ ಅರ್ಪಿಸಿ, ಆತನ ಪದತಲದಲ್ಲಿ ಲೀನವಾದವನು ಬಲಿಯೆಂಬ ಈ ಮಹಾಮಹಿಮ. ಆವನಂತೆ ನಾವೂ ನಮ್ಮ 'ಅಹಂ' 'ಮಮ'ಗಳನ್ನು ಭಗವಂತನಿಗೆ ಅರ್ಪಿಸಿದ್ದೇ ಆದಲ್ಲಿ ಅವನ ಕೃಪೆಗೆ ಪಾತ್ರರಾಗುವುದು ಎಷ್ಟು ದೂರ ಉಳಿದೀತು!

**ಸೋದರ ಬಿದಿಗೆ:** ಮಾರನೆಯ ದಿನ ಎಂಟು ಜಾವದಲ್ಲಿ ನಾಲ್ಕೂ ವರೆ ಜಾವ ಇದ್ದಾಗ **'ಸ್ವರಕ್ಷಣಕಾಮೋ ಯಮಾದಿಪೂಜನಮಹಂ ಕರಿಷ್ಯೇ'** ಎಂದು ಸಂಕಲ್ಪಿಸಿ, ಕಲಶಜಲದಲ್ಲಿ ಯಮನನ್ನು ಆವಾಹಿಸಿ, ಸಾಲಿಗ್ರಾಮದೊಡನೆ ಎರಡಕ್ಕೂ ಅರ್ಘ್ಯಪಾದ್ಯಾದಿ ಪೂಜೆಯನ್ನು ಸಲ್ಲಿಸಬೇಕು. 'ಯಮುನೆಯ ಸೋದರನಾದ ಯಮರಾಜನೆ, ಸೂರ್ಯಪುತ್ರನೆ, ಕಿಂಕರರೊಡಗೂಡಿದ ನನ್ನನ್ನು ಕಾಪಾಡು' ಎಂದು ಪ್ರಾರ್ಥನೆ ಸಲ್ಲಿಸಬೇಕು. ಅನಂತರ ಯಮುನಾಪೂಜೆಯನ್ನೂ ಮಾಡಬೇಕು. ಸೋದರನನ್ನು ಮನೆಗೆ ಕರೆದು ಊಟ ಬಡಿಸಿ, 'ಸೋದರನೇ ನಾನು ನಿವೇದಿಸುತ್ತಿರುವ ಈ ಆಹಾರವನ್ನು ಸೇವಿಸು. ಇದರಿಂದ ಯಮಯಮುನೆಯರು ಸುಪ್ರೀತರಾಗಲಿ' ಎಂದು ಪ್ರಾರ್ಥಿಸಬೇಕು.

ಯಮ ಹಾಗೂ ಯಮುನೆಯರು ಸೋದರ-ಸೋದರಿಯರು. ಯಮುನೆ ತನ್ನ ಅಣ್ಣನನ್ನು ಮನೆಗೆ ಬರಬೇಕೆಂದು ಕರೆಯುತ್ತಲೇ ಇದ್ದಳು. ಯಮನಿಗೆ ಬಿಡುವೇ ಇಲ್ಲದ್ದರಿಂದ, ಅವನು ಅವಳ ಮನೆಗೆ ಬರುವುದನ್ನು ಮುಂದೆ ಹಾಕುತ್ತಲೇ ಬಂದ. ಕೊನೆಗೆ ಒಂದು ದಿನ ಯಮುನೆ 'ಇಂದು ನೀನು ಬರಲೇಬೇಕು' ಎಂದು ಅಣ್ಣನ ಮೇಲೆ ಒತ್ತಾಯ ಹೇರಿ ಹಠಮಾಡಿದಳು. ಅಂದು ಕಾರ್ತಿಕ ಶುದ್ಧ ಬಿದಿಗೆ. ಅಂದು ನರಕ ಪ್ರವೇಶಕರಿಗೆ, ನರಕ ಅಧಿಕಾರಿಗಳಿಗೆ ಎಲ್ಲರಿಗೂ ರಜೆ ನೀಡಿ, ತಂಗಿಯ ಹಠಕ್ಕೆ ಮಣಿದು ಯಮನು ಅವಳ ಮನೆಗೆ ಬರಲೇ ಬೇಕಾಯಿತು. ಆದುದರಿಂದ ಅಂದು ಸೋದರರು ಸೋದರಿಯರ ಮನೆಯಲ್ಲಿ ಊಟಮಾಡುತ್ತಾರೆ. ಇದರಿಂದ ಯಮನ ಶಿಕ್ಷೆಯಿಂದ ರಿಯಾಯಿತಿ ದೊರಕುತ್ತದೆ ಎಂಬ ನಂಬಿಕೆ ಜನರಲ್ಲಿದೆ. ಸೋದರಿಯರಿಲ್ಲದವರು ದಾಯಾದಿ ಸೋದರಿಯರ ಮನೆಗೋ ಬಂಧುಮಿತ್ರರ ಸೋದರಿಯರ ಮನೆಗೋ ಹೋಗಿ ಊಟಮಾಡಬೇಕು. ಕೊನೆಗೆ ಗಿಡಮರಗಳಲ್ಲಾದರೂ ಸೋದರ ಭಾವ ಹೊಂದಿ, ಅದರೊಡನೆ ಊಟ ಮಾಡಬೇಕು ಎಂದು ಶಾಸ್ತ್ರಗಳು ತಿಳಿಸುತ್ತವೆ.

ಈ ಪರಂಪರೆ ಸಾಧಾರಣವಾಗಿ ಪ್ರಚಲಿತವಾಗಿಲ್ಲದಿದ್ದರೂ ಹಲವಾರು ಕುಟುಂಬಗಳು ವಂಶಪರಂಪರೆಯಿಂದ ಈ ಆಚರಣೆಯನ್ನು ನಡೆಸಿಕೊಂಡು ಬರುತ್ತಿವೆ. ಸಹಮಾನವರೊಡನೆ, ಸಹಜೀವಿಗಳೊಡನೆ ವಿಶ್ವಭ್ರಾತೃತ್ವಭಾವ, **'ವಸುಧೈವ ಕುಟುಂಬಕಂ'** ಎಂಬ ಭಾವಗಳನ್ನು ಬೆಳೆಸಿಕೊಳ್ಳಲು ಇದು ಪ್ರೇರಕವಾಗಿದೆ.

ಇದೇ ದಿನ ಹಸುಗಳನ್ನೂ ಎತ್ತುಗಳನ್ನೂ ಶುದ್ಧಸ್ನಾನ ಮಾಡಿಸಿ ಅಲಂಕರಿಸುವ ಪದ್ಧತಿಯಿದೆ. ಅವುಗಳಿಗೆ ಸುಗ್ರಾಸ ಕೊಟ್ಟು, ಕಲ್ಪಿತ ಗೋವರ್ಧನ ಬೆಟ್ಟವನ್ನು ಹಸುವಿನ ಸಗಣಿಯಿಂದಲೋ ಅನ್ನದ ರಾಶಿಯಿಂದಲೋ ನಿರ್ಮಾಣ ಮಾಡಿ, ಅಥವಾ ಚಿತ್ರ ಬರೆದು ಅದನ್ನೂ ಪೂಜಿಸಬೇಕು. ಅಲಂಕರಿಸಿ ಪೂಜಿಸಿದ ಗೋವುಗಳನ್ನು ಕರೆದುಕೊಂಡು ಬಂದು ಈ ಬೆಟ್ಟಕ್ಕೆ ಪ್ರದಕ್ಷಿಣೆ ಬರಬೇಕು. ಬಳಿಕ ಗೋವರ್ಧನನಿಗೆ, ಗೋಪಾಲನಿಗೆ ನೈವೇದ್ಯ ಮಾಡಿ ಅದನ್ನು ಎಲ್ಲರೂ ಹಂಚಿಕೊಂಡು ಪ್ರಸಾದವಾಗಿ ಸ್ವೀಕರಿಸಬೇಕು. ಈ ಪರಂಪರೆಯೂ ಹಲವೆಡೆ ಪ್ರಚಲಿತದಲ್ಲಿದ್ದು ಇದೂ ಮೇಲಿನ ವಿಶ್ವ ಕುಟುಂಬ ಭಾವಕ್ಕೆ ಪೂರಕವಾಗಿದೆ.

ಹೀಗೆ ದೀಪಾವಳಿ ಹಬ್ಬವು ಜೀವಿಗಳ ಅರಿವಿಗೆ ಸಾಧಕವಾದ ಜ್ಞಾನೇಂದ್ರಿಯ ರೂಪದೀಪಗಳಿಗೆ, ಅವುಗಳ ವಿಷಯಗಳಾದ ಶಬ್ದರೂಪಾದಿ ದೀಪಗಳಿಗೆ, ಇವುಗಳಿಗೂ ಬೆಳಕಾಗಿರುವ ಪ್ರಾಣದೀಪಕ್ಕೆ, ಪ್ರತಿ ಜೀವಿಯ ಸಾರ ಸರ್ವಸ್ವವನ್ನು ತುಂಬಿ ಬೆಳಗುವ ಪರಿಪೂರ್ಣ ಪರಂಜ್ಯೋತಿ ದೀಪಕ್ಕೆ ಸೂಚಕವಾಗಿದ್ದು, ಜೀವಗಳ ಅಂತರಂಗ ಬಹಿರಂಗ ಅನುಭವಗಳಿಗೆ ಸಾಕ್ಷೀಭೂತವಾಗಿದೆ. ಇಹಲೋಕ-ಪರಲೋಕ ಸುಖ ಶಾಂತಿ ಸಮೃದ್ಧಿಗಳೊಡನೆ ಸಕಲಜೀವಿಗಳ ಸ್ನೇಹ, ಪ್ರೀತಿ, ಹಿತ ಕಾಮನೆಯೊಡಗೂಡಿದ ಹಬ್ಬವಾಗಿದೆ, ದೀಪಾವಳಿ. ✷

# ಆತ್ಮಜಾಗೃತಿ



❖ ಜ್ಞಾನೋದಯವಾದರೆ ಆತ ದೂರದಲ್ಲಿದ್ದಾನೆ ಎಂಬುದಾಗಿ ಅನಿಸೋದಿಲ್ಲ. ಆಗ ಅವನು ಅವನಾಗಿ ತೋರೋದಿಲ್ಲ. ಇವನಾಗಿ ಬಿಡುತ್ತಾನೆ. ಆಗ ಅವನನ್ನು ಹೃದಯ ಮಧ್ಯದಲ್ಲಿ ನೋಡಬಹುದು. ಆತ ಎಲ್ಲರ ಅಂತರ್ಯದಲ್ಲಿಯೂ ಇದ್ದಾನೆ ಅರಸಿದವರಿಗೆ ದೊರೆತು ಬಿಡುತ್ತಾನೆ.

❖ ಆತ್ಮಜಾಗೃತಿ ಆಗದೆ ಇದ್ದರೆ ಆತನ ಸ್ವರೂಪವನ್ನು ಅರಿಯಲಾಗುವುದಿಲ್ಲ. ವಿಚಾರದ ಆವಶ್ಯಕತೆ ಎಲ್ಲಿಯವರೆಗೆ? ಆತನ ಸಾಕ್ಷಾತ್ಕಾರವಾಗದವರೆಗೆ. ಎಲ್ಲವೂ ಆತನೇ ಆಗಿರುವುದನ್ನು ನಾನೂ ಪ್ರತ್ಯಕ್ಷವಾಗಿ ನೋಡುತ್ತಿದ್ದೇನೆ ಅಂತ ಬರೀ ಬಾಯಿಮಾತಿನಲ್ಲಿ ಹೇಳಿಬಿಟ್ಟರಾಗುವುದಿಲ್ಲ; ಆತನ ಕೃಪೆಯಿಂದ ಆತ್ಮಜಾಗೃತಿ ಉಂಟಾಗಬೇಕು. ಆತ್ಮಜಾಗೃತಿಗೊಂಡಿತು ಅಂದರೆ ಸಮಾಧಿಯುಂಟಾಗುತ್ತದೆ; ಆಗ ದೇಹ ಭಾವನೆ ಹೊರಟುಹೋಗುತ್ತದೆ; ಕಾಮಕಾಂಚನಾಸಕ್ತಿ ಇರದು; ಭಗವದ್ವಿಷಯ ವಿನಾ ಬೇರೆ ಏನೂ ರುಚಿಸದು; ಪ್ರಾಪಂಚಿಕ ಮಾತುಕತೆಗಳು ಕಿವಿಗೆ ಬಿತ್ತು ಅಂದರೆ ಯಾತನೆಯುಂಟಾಗುತ್ತದೆ. ಆತ್ಮಜಾಗೃತಿಗೊಂಡರೇನೇ ಭಗವಂತನನ್ನು ಅರಿಯಲು ಸಾಧ್ಯವಾಗುತ್ತದೆ.

❖ ಯಾರಿಗೇ ಆಗಲಿ ಒಮ್ಮೆ ಆತ್ಮಜಾಗೃತಿಯುಂಟಾಗಿಬಿಟ್ಟಿತು ಅಂದರೆ, ಒಮ್ಮೆ ಭಗವಂತನ ದರ್ಶನ ದೊರೆತುಬಿಟ್ಟಿತು ಅಂದರೆ, ಈ ಕೆಲಸಕ್ಕೆ ಬಾರದವುಗಳ ವಿಷಯವಾಗಿ ತಿಳಿದುಕೊಳ್ಳಲು ಇಚ್ಛೆಯೇ ಬರುವುದಿಲ್ಲ. ವಿಷಮಶೀತಜ್ವರದಿಂದ ಸನ್ನಿ ಮುಚ್ಚಿಕೊಂಡಿರುವ ರೋಗಿ ಹೇಳುತ್ತಾನೆ, 'ನಾನು ಐದು ಸೇರು ಅಕ್ಕಿಯ ಅನ್ನ ಊಟಮಾಡಿಬಿಡುತ್ತೇನೆ, ಒಂದು ಇಡೀ ಕೆರೆ ನೀರನ್ನೇ ಕುಡಿದು ಬಿಡುತ್ತೇನೆ!' ಆಗ ಡಾಕ್ಟರ್ ಹೇಳುತ್ತಾನೆ, 'ಹಾಗೇನು? ಆಗಲಿ! ಬಹಳ ಒಳ್ಳೆಯದು'. ಹೀಗೆಂದು ಹೇಳಿ ಹುಕ್ಕ ಸೇದುತ್ತ ಹರಟೆ ಹೊಡೆಯುತ್ತಿರುತ್ತಾನೆ. ಆದರೆ ಯಾವಾಗ ಸನ್ನಿ ಇಳಿದು ಹೋಗಿ ಬಿಡುವುದೋ ಆಗ ರೋಗಿಯ ಕಷ್ಟಸುಖಗಳಿಗೆಲ್ಲ ಕಿವಿಗೊಡಬೇಕಾಗುತ್ತದೆ.

❖ ಎಲ್ಲರಿಗೂ ಬ್ರಹ್ಮಜ್ಞಾನ ಸಾಧ್ಯ. ಜೀವಾತ್ಮ ಪರಮಾತ್ಮ ಎಂಬ ಎರಡು ವಸ್ತುಗಳು ಇವೆ. ಪ್ರಾರ್ಥನೆಯಿಂದ ಜೀವಾತ್ಮ ಪರಮಾತ್ಮನೊಡನೆ ಐಕ್ಯವಾಗಲು ಸಾಧ್ಯ. ಗ್ಯಾಸ್ ಕಂಪೆನಿಯವರು ಪ್ರತಿಯೊಂದು ಮನೆಗೂ ತಮ್ಮ ಕೊಳವೆಯನ್ನು ಕೂಡಿಸಿದ್ದಾರೆ. ಗ್ಯಾಸನ್ನು ಕಂಪೆನಿಯಿಂದ ಪಡೆದುಕೊಳ್ಳಬಹುದು. ಕಂಪೆನಿಗೆ ಒಂದು ಅರ್ಜಿ ಹಾಕಿಕೊಂಡರೆ ಅವರು ಗ್ಯಾಸ್ ಸರಬರಾಜು ಮಾಡುತ್ತಾರೆ. ಬಳಿಕ ಮನೆಗಳಲ್ಲಿ ದೀಪ ಹೊತ್ತಿಸಿಕೊಳ್ಳಬಹುದು.

ಕೆಲವರಲ್ಲಿ ಆಗಲೇ ಆತ್ಮಜಾಗೃತಿ ಉಂಟಾಗಿ ಬಿಟ್ಟಿರುತ್ತದೆ. ಅವರಲ್ಲಿ ಒಂದು ವಿಶೇಷ ಗುಣ ನೋಡಬಹುದು. ಭಗವತ್ಸಂಬಂಧವಾದ ಮಾತುಕತೆ ವಿನಾ ಬೇರೆ ಏನೂ ಅವರಿಗೆ ರುಚಿಸದು. ಅವರು ಚಾತಕಪಕ್ಷಿಯ ಹಾಗೆ. ಏಳು ಸಮುದ್ರದಲ್ಲಿ, ಗಂಗೆಯಲ್ಲಿ, ಯಮುನೆಯಲ್ಲಿ ಉಳಿದ ನದಿಗಳಲ್ಲಿ ನೀರು ಸುಮ್ಮನೆ ತುಂಬಿದೆ. ಅದಕ್ಕೆ ಬೇಕಾಗಿರುವುದು ಮಳೆ ನೀರು. ನೀರಡಿಕೆಯಿಂದ ಗಂಟಲು ಒಣಗಿ ಸಾಯುತ್ತಿದ್ದರೂ ಅದು ಬೇರೆ ಯಾವ ನೀರನ್ನೂ ಕುಡಿಯದು.

❖ ಮತ್ತೆ ನಿತ್ಯಸಿದ್ಧರಿದ್ದಾರೆ. ಅವರು ಆತ್ಮಜಾಗೃತಿಯನ್ನು ಹೊಂದಿಯೇ ಪ್ರತಿಯೊಂದು ಸಲವೂ ಜನ್ಮವೆತ್ತುತ್ತಾರೆ. ಇವರನ್ನು ಮುಚ್ಚಿಹೋಗಿರುವ ಬುಗ್ಗೆಗಳಿಗೆ ಹೋಲಿಸಬಹುದು. ಕೊಳಾಯಿಗಾರ ತೋಟದಲ್ಲಿ ಅಲ್ಲಿ ಇಲ್ಲಿ ಅಗೆಯುತ್ತಿರುವಾಗ ಅಕಸ್ಮಾತ್ತಾಗಿ ಆತ ಬುಗ್ಗೆಯ ತಡೆಯನ್ನು ತೆಗೆದುಹಾಕಿಬಿಡಬಹುದು. ಆಗ ನೀರು 'ಭರ್, ಭರ್' ಅಂತ ಹೊರಕ್ಕೆ ನುಗ್ಗಿಬರುತ್ತದೆ. ಹಾಗೆ ನಿತ್ಯಸಿದ್ಧರ ಪ್ರಥಮಾನುರಾಗ ವ್ಯಕ್ತವಾದಾಗ ಜನ ಆಶ್ಚರ್ಯಚಕಿತರಾಗಿ ಹೇಳುತ್ತಾರೆ: ''ಇಷ್ಟೊಂದು ಭಕ್ತಿ, ವೈರಾಗ್ಯ, ಪ್ರೇಮ ಎಲ್ಲಿ ಇತ್ತು?''

❖ ಅದ್ವೈತಜ್ಞಾನ ದೊರೆತನಂತರ ಆತ್ಮಜಾಗ್ರತಿಯುಂಟಾಗಿ ಬಿಡುತ್ತದೆ. ಆಗ ಸರ್ವಭೂತಗಳಲ್ಲೂ ಭಗವಂತ ಚೈತನ್ಯರೂಪದಿಂದಿರುವುದು ಕಾಣಬರುತ್ತದೆ. ಈ ಅನುಭವ ದೊರೆತ ನಂತರ ಆನಂದ ದೊರೆಯುತ್ತದೆ. ಮೊದಲು ಅದ್ವೈತಜ್ಞಾನ, ಬಳಿಕ ಆತ್ಮಜಾಗ್ರತಿ, ಅನಂತರ ನಿತ್ಯಾನಂದ.

❖ ಜೀವ ಮೊದಮೊದಲು ಅಜ್ಞಾನಾವಸ್ಥೆಯಲ್ಲಿ ಮುಳುಗಿಕೊಂಡಿರುತ್ತದೆ. ಅದಕ್ಕೆ ಭಗವಂತನ ಜ್ಞಾನವಿರದು; ನಾನಾ ವಸ್ತುಗಳ ಜ್ಞಾನ–ಅನೇಕ ವಸ್ತುಗಳ ಜ್ಞಾನ ಇರುತ್ತದೆ. ಆದರೆ ಜ್ಞಾನ ದೊರೆತಾಗ ಅದಕ್ಕೆ ಬೋಧೆಯಾಗುತ್ತದೆ, ಭಗವಂತ ಸರ್ವಭೂತಗಳಲ್ಲೂ ಇದ್ದಾನೆ ಎಂದು. ಒಬ್ಬನ ಕಾಲಿಗೆ ಮುಳ್ಳು ಚುಚ್ಚಿಕೊಂಡಿದೆ ಅಂತ ಇಟ್ಟುಕೊಳ್ಳಿ. ಆತ ಇನ್ನೊಂದು ಮುಳ್ಳನ್ನು ಹುಡುಕಿತಂದು ಮೊದಲನೆ ಮುಳ್ಳನ್ನು ತೆಗೆದುಹಾಕಿಬಿಡುತ್ತಾನೆ. ಎಂದರೆ, ಸಾಧಕ 'ಅಜ್ಞಾನ'ವೆಂಬ ಮುಳ್ಳನ್ನು 'ಜ್ಞಾನ'ವೆಂಬ ಮುಳ್ಳಿನಿಂದ ತೆಗೆದು ಹಾಕುತ್ತಾನೆ. ವಿಜ್ಞಾನ ದೊರೆತಾಗ ಆತ ಎರಡು ಮುಳ್ಳನ್ನೂ ಬಿಸಾಡಿಬಿಡುತ್ತಾನೆ – ಅಜ್ಞಾನದ ಮುಳ್ಳು, ಜ್ಞಾನದ ಮುಳ್ಳು ಎರಡನ್ನೂ. ಬಳಿಕ ಆತ ರಾತ್ರಿ ಹಗಲು ಭಗವಂತನನ್ನು ಕೇವಲ ದರ್ಶನ ಮಾಡುತ್ತಿರುವುದೇ ಅಲ್ಲ, ಆತನೊಡನೆ ಮಾತುಕತೆಯಾಡುತ್ತಲೂ ಇರುತ್ತಾನೆ.

ಶ್ರೀರಾಮಕೃಷ್ಣ ವಚನವೇದದಿಂದ

# ತತ್ತ್ವ-ಜ್ಞಾನ

- ಪುಷ್ಪಾ ಶೇಷಾದ್ರಿ

ಜೀವನದಲ್ಲಿ ಶ್ರೇಯಸ್ಸಿನ ರಹಸ್ಯವೇ ಆಧ್ಯಾತ್ಮಿಕ ಸಂಪನ್ನತೆ. ಅದಕ್ಕೆ ಅತ್ಯಗತ್ಯವಾದ ಜೀವನವಿಧಾನವನ್ನು ಕಲಿಸಿಕೊಡುವುದೇ ತತ್ತ್ವಜ್ಞಾನ. ಯೋಗ, ಸಾಧನೆ, ತತ್ತ್ವ, ಅಧ್ಯಾತ್ಮ - ಎಲ್ಲವೂ ಆಧ್ಯಾತ್ಮಿಕ ಜೀವನವನ್ನು ಮುನ್ನಡೆಸುವುದು ಎಂಬ ವಿಚಾರವನ್ನು ವಿಶದಪಡಿಸಿರುವ ಲೇಖಕಿ, ಮೈಸೂರಿನ ನಿವಾಸಿಗಳು ಹಾಗೂ ಆಶ್ರಮದ ಭಕ್ತರು.

**ಯೋ**ಗವೆಂದರೆ ಒಂದುಗೂಡಿಸುವುದು. ಅಂದರೆ, ಆತ್ಮನನ್ನು ಪರಮಾತ್ಮನೊಡನೆ ಸಂಪರ್ಕಿಸುವುದು. ಇವೆರಡೂ ಒಂದನ್ನೊಂದು ಹೊಂದಿಕೊಂಡಿವೆ. ಆದರೆ ನಮ್ಮ ಅಜ್ಞಾನದಿಂದ ಅವುಗಳ ಸಂಪರ್ಕ ಕಡಿದು ಹೋಗಿದೆ. ಅದನ್ನು ಯೋಗಾಭ್ಯಾಸದಿಂದ ಒಂದುಗೂಡಿಸಲು ಸಾಧ್ಯ. ಆದ್ದರಿಂದ ವಿವೇಕವನ್ನು ಹೊಂದಬಹುದಾದ ಮನುಷ್ಯಜನ್ಮ ನಮಗೆ ದೊರಕಿರುವುದರಿಂದ ಈ ಜನ್ಮದಲ್ಲೇ ಅದನ್ನು ಪಡೆಯಲು ಪ್ರಯತ್ನಿಸಬೇಕು. ಆತ್ಮವು ಸತ್ವಗುಣದಲ್ಲಿದ್ದಾಗ, ಪಂಚೇಂದ್ರಿಯಗಳು ಮತ್ತು ದೇಹ ಪ್ರಶಾಂತಗುಣವುಳ್ಳದ್ದಾಗಿರುವುದು. ಏಕೆಂದರೆ ಪರಮಾತ್ಮನು ಸತ್ವಗುಣಿ. ನಾವು ಮನಸ್ಸನ್ನು ಪರಮಾತ್ಮನ ಕಡೆಗೆ ತಿರುಗಿಸಿದಾಗ, ನಾವು ಸಹ ಆ ಪರಮಾತ್ಮನ ಸತ್ವಗುಣಗಳನ್ನು ಪಡೆಯಲು ಸಾಧ್ಯ. ಅದಕ್ಕೆ ಧ್ಯಾನ ಮಾಡುವಾಗ ದೇವರ ಗುಣಗಳನ್ನು ಧ್ಯಾನಮಾಡ ಬೇಕು.

ಇದರಿಂದ ನಮಗಾಗುವ ಪ್ರಯೋಜನವೇನು? ಎಂದು ತಿಳಿಯಬೇಕಾದರೆ, ಜ್ಞಾನದ ಆವಶ್ಯಕತೆ ಇದೆ. ಜ್ಞಾನದ ವಿಷಯವಾಗಿ ನಮಗೆ ಸರಿಯಾದ ತಿಳುವಳಿಕೆ ಇಲ್ಲದಿರುವುದರಿಂದ, ಅಧ್ಯಾತ್ಮದಲ್ಲಿ ನಮಗೆ ನಂಬಿಕೆ ಬಾರದು. ಇದನ್ನರಿಯಲು ನಮ್ಮಲ್ಲಿರುವ ಗುಣ ತತ್ತ್ವಪ್ರಧಾನವಾಗಿರಬೇಕು. ಮೊದಲನೆಯದಾಗಿ, ತನ್ನನ್ನು ತಾನು ಅರಿಯಬೇಕು. ಇದನ್ನರಿಯಲು ಜ್ಞಾನ ಬೇಕಾಗುವುದು. ಎಲ್ಲರಿಗೂ ನಾವು ಆತ್ಮಸ್ವರೂಪಿ ಎಂದು ಗೊತ್ತು. ಆದರೆ ಅದನ್ನು ಸರಿಯಾಗಿ ಅನುಭವಿಸಲು ಜ್ಞಾನ ಮತ್ತು ಸತ್ವಗುಣಗಳ ಆವಶ್ಯಕತೆ ಇದೆ. ಪ್ರೇಮ, ಶಾಂತಿ, ಪವಿತ್ರತೆ, ವಿವೇಕ, ಸಂತೋಷ, ಶಕ್ತಿ ಮತ್ತು ಅಧ್ಯಾತದ ಅರಿವು - ಈ ಏಳು ಗುಣಗಳು ನಮ್ಮ ಮೂಲ ಗುಣಗಳು. ಅವು ನಮ್ಮೊಳಗೆ ಅಡಗಿವೆ. ಇವುಗಳನ್ನು ಹೊರತರಲು, ಅಧ್ಯಾತ್ಮ ಜ್ಞಾನ ಮತ್ತು ಪ್ರಯತ್ನ ಬೇಕು.

ಮನಸ್ಸು ಮತ್ತು ಬುದ್ಧಿಯ ಪವಿತ್ರತೆಯಿಂದ ನಾವು ಎಲ್ಲರಲ್ಲೂ ಒಳ್ಳೆಯ ಸಂಬಂಧವನ್ನು ಬೆಳೆಸಲು ಸಾಧ್ಯ. ಪವಿತ್ರತೆಯಿಂದ ನೆಮ್ಮದಿ ಮತ್ತು ಶಾಂತಿ ಸಿಗುವುದು. ಸರಿಯಾದ ತಿಳುವಳಿಕೆ ಇಲ್ಲದಾಗ, ಮನಸ್ಸು ತಳಮಳಗೊಳ್ಳುವುದು. ಅರಿವು ಸರಿಯಾಗಿದ್ದರೆ, ಶಾಂತಿ ಸ್ವಭಾವದಿಂದ ನಮ್ಮ ದೃಷ್ಟಿಕೋನ, ಭಾವನೆ, ವ್ಯವಹಾರ ಎಲ್ಲದರಲ್ಲೂ ಪವಿತ್ರತೆಯನ್ನು ಕಾಣಬಹುದು.

ಎರಡನೆಯದಾಗಿ ಶಕ್ತಿ. ಇದು ನಮ್ಮಲ್ಲಿರುವ ಮತ್ತೊಂದು ಗುಣ. ಇಲ್ಲಿ ಶಕ್ತಿ ಎಂದರೆ ದೃಢಕಾಯದ, ದೇಹದ ಶಕ್ತಿ ಎಂದಲ್ಲ, ಬದಲು ದೈವೀಗುಣ ಮತ್ತು ಪವಿತ್ರವಾದ ಆಲೋಚನೆಯ ಶಕ್ತಿ, ಆತ್ಮದ ಸ್ವಧರ್ಮ. ಎಲ್ಲದಕ್ಕೂ ಪವಿತ್ರತೆಯೇ ಆಧಾರ. ಹೇಗೆ ನಾವು ದೇವಸ್ಥಾನಕ್ಕೆ ಹೋದಾಗ, ಚಪ್ಪಲಿಗಳನ್ನು ಹೊರಗಿಟ್ಟು, ಒಳಗೆ ಭಗವಂತನ ದರ್ಶನಕ್ಕೆ ಹೋಗುವೆವೋ, ಅಂತೆಯೇ ನಮ್ಮಲ್ಲಿರುವ 'ಅಹಂ' ಅನ್ನು ನಮ್ಮಿಂದ ಹೊರಗಿಟ್ಟು, ಮನಸ್ಸನ್ನು ಒಳತಿರುಗಿಸಿ ನೋಡಿದರೆ, ಅಲ್ಲಿ ಪವಿತ್ರತೆ ಸಿಗುವುದು. ನಮ್ಮ 'ಅಹಂ'ನಿಂದ ನಾವು ಹೊರಬಂದರೆ, ಬೇರೆಯವರಿಗೆ ಪ್ರೀತಿ, ಸಹಾನುಭೂತಿ, ಅನುಕಂಪಗಳನ್ನು ಕೊಡಲು ಸಾಧ್ಯ. ನಮ್ಮ ಮನಸ್ಸೇ ಚಂಚಲವಾಗಿದ್ದಲ್ಲಿ 'ನನ್ನ ಬಿಟ್ಟರೆ ಸಮಾನರಿಲ್ಲ'ವೆಂದು ತಿಳಿದರೆ, ಮತ್ತೊಬ್ಬರಿಗೆ ನಾವೇನು ಕೊಡಲು ಸಾಧ್ಯ? ನಾವು ಮೊದಲು ಮತ್ತೊಬ್ಬರಿಗೆ ಪ್ರೇಮ, ಸಹಾನುಭೂತಿಯನ್ನು ನೀಡಿದರೆ, ಅವರಿಂದಲೂ ಅದನ್ನೇ ಪಡೆಯಲು ಸಾಧ್ಯ. ಬಸವಣ್ಣನವರು ಹೇಳುವಂತೆ, 'ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ.' ನಾವು ಒಂದು ಚೆಂಡನ್ನು ಗೋಡೆಗೆ ಎಸೆದರೆ, ಅದು ಪುನಃ ಹಿಂತಿರುಗಿ ಬರುವುದು. ಮಾನವನು ಸಹಜವಾಗಿ ಆಶಾವಾದಿ, ಮತ್ತೊಬ್ಬರಿಂದ ಬಯಸುವೆವು. ಬಯಕೆ, ಆಸೆ ಫಲಿಸದಿದ್ದರೆ 'ನಿರಾಸೆ'; ಫಲಿಸಿದರೆ 'ಮತ್ತಷ್ಟರಾಸೆ.' ಭಗವದ್ಗೀತೆಯ ಎರಡನೇ ಅಧ್ಯಾಯದಲ್ಲಿ ಪರಮಾತ್ಮನು ಹೇಳಿರುವಂತೆ,

ಧ್ಯಾಯತೋವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ।
ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಽಭಿಜಾಯತೇ।
ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ।
ಸ್ಮೃತಿಭ್ರಂಶಾತ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ॥

-ಹೀಗೆ ಆಸೆಯಿಂದ ಎಲ್ಲವೂ ನಾಶವಾಗುವುದು. ಆಸೆ ಫಲಿಸದಿದ್ದರೆ, ಮನಸ್ಥಿತಿಯನ್ನು ಕಳೆದುಕೊಳ್ಳುವೆವು. ಆ ಸ್ಥಿತಿಯಲ್ಲಿ ನಾವು ಆಡಿದ ಮಾತು, ಕಾರ್ಯ ಎಲ್ಲವೂ ವ್ಯರ್ಥ. ಆದ್ದರಿಂದ ಆಸೆಯೇ ದುಃಖಕ್ಕೆ ಮೂಲ. ಆಸೆ ಇಲ್ಲದೆ ಜೀವನವೇ ಸಾಧ್ಯವಿಲ್ಲ; ಆದರೆ ಅತಿ ಆಸೆ ಇರಬಾರದಷ್ಟೆ. ಇಲ್ಲಿ ಡಿ.ವಿ.ಜಿ.ಯವರ ಮಂಕುತಿಮ್ಮನ ಕಗ್ಗದಲ್ಲಿ ಬರುವ 'ಅತಿ ಎಲ್ಲಿಯುಂ ಬೇಡ ಮಿತಿ ಇರಲಿ ಜೀವನದಿ' ಎಂಬ ಪದ್ಯ ನೆನಪಾಗುವುದು. ಯಾವಾಗ ನಾವು ಯಾರಿಂದಲೂ ಏನನ್ನೂ ಬಯಸುವುದಿಲ್ಲವೋ, ಆಗ ನಮಗೆ ಎಲ್ಲವೂ ಆಪ್ಯಾಯಮಾನವಾಗಿರುವುದು ಸಹಜ. ಇದಕ್ಕಾಗಿ ನಾವು ನಿರ್ಲಿಪ್ತತೆಯಿಂದ ಇರಬೇಕು. ಗೀತೆಯಲ್ಲಿ ಭಗವಂತ, ನಿರ್ಲಿಪ್ತತೆಯಿಂದ ಕರ್ತವ್ಯ ಮಾಡಿರೆಂದು ಒತ್ತಿ ಒತ್ತಿ ಹೇಳುವನು.

ಮನಸ್ಸು ಎಂದರೆ ಆಲೋಚನೆ. ಅದು ಒಂದಕ್ಕೊಂದು ಹೊಂದಿಕೊಂಡಿರುವುದು. ನಾವು ಬಹಳ ಉದ್ವಿಗ್ನರಾದಾಗ, ಉಸಿರಾಟ ಜೋರಾಗುವುದನ್ನು ಗಮನಿಸಬಹುದು. ಆದ್ದರಿಂದಲೇ ಪ್ರಾಣಾಯಾಮಕ್ಕೆ ಬಹಳ ಪ್ರಾಮುಖ್ಯತೆ ಕೊಟ್ಟಿರುವರು. ಅದರಿಂದ ಮನಸ್ಸು ಶಾಂತಿ, ಸಮಾಧಾನವಾಗಿರಲು ಸಾಧ್ಯ. ಆಗ ನಮ್ಮ ಆಲೋಚನೆ ಸಹ ಒಳ್ಳೆಯ ಪರಿಣಾಮವನ್ನು ಬೀರುವುದು.

ಶಾಂತಿ, ಸತ್ಸಂಗ, ಪೂಜೆಯಿಂದ ನೆಮ್ಮದಿ ಬರುವುದು. ಆದರೆ ನಿಜವಾದ ಶಾಂತಿ, ಸಮಾಧಾನ ಬರಬೇಕಾದರೆ ನಾವು ಪರಮಾತ್ಮನಲ್ಲಿ ಸಂಪರ್ಕವನ್ನಿರಿಸಬೇಕು. ಆಗ ಮನಸ್ಸು ಸತ್ವಪ್ರಧಾನವಾಗಿರುವುದು. ಅದಿಲ್ಲದೆ ನಾವು ಪ್ರಾಪಂಚಿಕತೆಯ ಕೆಳಮಟ್ಟಕ್ಕಿಳಿದರೆ, ಅದು ಸಾಧಾರಣ ಸ್ಥಿತಿಯಾಗುವುದು.

Torchನಲ್ಲಿ ವಿದ್ಯುತ್ ಕಡಿಮೆಯಾದಾಗ, ಅದು ಸರಿಯಾಗಿ ಬೆಳಕು ನೀಡುವುದಿಲ್ಲ. ಆಗ ಅದನ್ನು ವಿದ್ಯುತ್ ಹರಿಯುವ ಪ್ಲಗ್‌ಗೆ ಹೊಂದಿಸಿದರೆ, ಅದೇ ಮತ್ತೆ re-charge ಆಗಿ ಬೆಳಕು ನೀಡುವುದು. ಅಂತೆಯೇ, ನಮ್ಮಲ್ಲಿರುವ ಆತ್ಮಜ್ಞಾನವನ್ನು ಪಡೆಯಬೇಕಾದರೆ, ಪದೇ ಪದೇ ಸತ್ಸಂಗ, ಧ್ಯಾನ, ಜಪ, ಇತ್ಯಾದಿಗಳ ಆವಶ್ಯಕತೆ ಇದೆ. ಆತ್ಮನ ಸ್ವರೂಪವೆಂದರೆ, ಮನಸ್ಸು, ಬುದ್ಧಿ, ಸಂಸ್ಕಾರ ಇವುಗಳ ಪರಿಶುದ್ಧತೆ.

**೧. ಮನಸ್ಸು :** ಮನಸ್ಸಿನ ಕೆಲಸವೆಂದರೆ, ಯೋಚನಾಶಕ್ತಿ. ಸಮುದ್ರದ ಅಲೆಗಳಂತೆ, ಒಂದಾದರೊಂದರಂತೆ, ಯೋಚನೆಗಳು ಬರುತ್ತಲೇ ಇರುವುವು. ಅದರಲ್ಲಿ ಬಹಳ ಮಟ್ಟಿಗೆ ಅನವಶ್ಯಕವಾದ ಯೋಚನೆಗಳೇ. ನಮ್ಮ ಈ ಒಂದು ಶಕ್ತಿಯನ್ನು ದೈವೀಗುಣ, ಪವಿತ್ರವಾದ ಆಲೋಚನೆ ಮತ್ತು ಶಕ್ತಿಯುತವಾದ ಆಲೋಚನೆಗಳಿಂದ ತುಂಬಬೇಕು. ಕಾಯಾ, ವಾಚಾ, ಮನಸಾ ನಮ್ಮ ಯೋಚನೆ ಪವಿತ್ರವಾಗಿದ್ದರೆ, ನಾವು ಪವಿತ್ರವಾಗಿರುವೆವು. ಆಗ ನಾವು ಆಡುವ ಮಾತು, ಮಾಡುವ ಕಾರ್ಯ ಇವು ಪವಿತ್ರವಾಗುವುದರಲ್ಲಿ ಸಂಶಯವಿಲ್ಲ.

**೨. ಬುದ್ಧಿ :** ಇದರ ಕಾರ್ಯ ವಿಚಾರ ಮಾಡುವ ಶಕ್ತಿ. ಅಂದರೆ ಯಾವುದು ಮಾಡಿದರೆ ಸರಿ, ಯಾವುದು ತಪ್ಪು ಎಂಬ ನಿರ್ಧಾರವನ್ನು ಮಾಡುವುದು. ವಿವೇಕದಿಂದ ದೃಢತೆ ಬರುವುದು. ಮಾತಿನಲ್ಲಾಗಲಿ, ಕೃತಿಯಲ್ಲಾಗಲಿ ಒಬ್ಬರಿಗೆ ನೋವನ್ನುಂಟುಮಾಡುವುದು ಸರಿಯಲ್ಲ. ಅಂತಹ ಸಂಧರ್ಭದಲ್ಲಿ ಸ್ವಲ್ಪ ಬುದ್ದಿ, ವಿವೇಕವನ್ನು ಉಪಯೋಗಿಸಿದರೆ, ನಮ್ಮ ಸಂಸ್ಕಾರವೇ ಬದಲಾಗುವುದು. ಪರಮಾತ್ಮ ಈ ಯೋಚನೆ ಎಂಬ ಶಕ್ತಿಯನ್ನು (ಪ್ರಾಣಿ, ಗಿಡ, ಮರಗಳಿಗೆ ನೀಡದೆ) ಮಾನವನಿಗೆ ಮಾತ್ರ ಕರುಣಿಸಿರುವನು. ಅದನ್ನು ಸದುಪಯೋಗಿಸಿಕೊಳ್ಳುವುದು ಆತ್ಮಸಾಕ್ಷಾತ್ಕಾರಕ್ಕೆ ನಮ್ಮ ಕೈಲಿರುವ ಬೀಗದ ಕೈ.

**೩. ಸಂಸ್ಕಾರ:** ಸಂಸ್ಕಾರವೆಂಬುದು ಒಂದು ಅಭ್ಯಾಸಯೋಗ. ನಮ್ಮ ಆಲೋಚನೆಯನ್ನಾಗಲಿ, ಕಾರ್ಯವನ್ನಾಗಲಿ ಪದೇ ಪದೇ ಮಾಡುವುದರಿಂದ ಅದು ಸಂಸ್ಕಾರವಾಗುವುದು. ನಾವು ಮಾಡುವ ಕಾರ್ಯ, ಮಾತು – ಅದು ಒಳ್ಳೆಯದಾದರೂ ಸರಿ, ಕೆಟ್ಟದ್ದಾದರೂ ಸರಿ, ಸಂಸ್ಕಾರದ ಬೀಜವನ್ನು ಬಿತ್ತಿಬಿಡುವುದು. ಅದನ್ನು ಅಳಿಸಲು ಅಸಾಧ್ಯ. ಆದ್ದರಿಂದ ನಾವು ಮಾಡುವ ಪ್ರತಿಯೊಂದು ಕಾರ್ಯ, ಮಾತಿನಲ್ಲಿ ಗಮನವಿಡಬೇಕು. ಸುಟ್ಟ ಬೀಜವನ್ನಾಗಲಿ, ಕೊಳೆತ ಬೀಜವನ್ನಾಗಲಿ ಬಿತ್ತಿದರೆ, ಅದರಲ್ಲಿ ಒಳ್ಳೆಯ ಫಲ ಅಸಾಧ್ಯ. ಅಂತೆಯೇ, ನಮ್ಮ ಕೆಟ್ಟ ಸಂಸ್ಕಾರವನ್ನು ಸುಟ್ಟು, ಒಳ್ಳೆಯ ಸಂಸ್ಕಾರವನ್ನು ಬಿತ್ತಿಕೊಂಡರೆ, ಒಳ್ಳೆಯ ಫಲ ನಮಗಾಗುವುದು.

ಆಲೋಚನೆಯಲ್ಲಿ ನಾಲ್ಕು ವಿಧ. ೧) ಸಕಾರಾತ್ಮಕ (Positive). ೨) ನಕಾರಾತ್ಮಕ (Negitive) ೩) ಆವಶ್ಯಕ ಅಥವಾ ಸಾಧಾರಣ ೪) ಅನವಶ್ಯಕ (Waste)

ನಾವು ಸಕಾರಾತ್ಮಕ ವಿಚಾರ ಮಾಡಿದರೆ, ನಮ್ಮ ಜ್ಞಾನವನ್ನು ಪುನಶ್ಚೇತನ (re-charge) ಗೊಳಿಸಬಹುದು. ನಮ್ಮಲ್ಲಿ ನಕಾರಾತ್ಮಕ ವಿಚಾರವೇ ಪ್ರಧಾನವಾಗಿದ್ದರೆ ಮಾಡುವ ಕೆಲಸ ಯಾವುದೂ ಸರಿ ಇರದು, ಯೋಚನಾಶಕ್ತಿ ಸಹ ಕುಂದುವುದು.

ಬುದ್ಧಿಯನ್ನು ಎರಡು ಭಾಗಗಳನ್ನಾಗಿ ಮಾಡಬಹುದು.

೧)ವಿವೇಕ ೨) ವಿಚಾರ. ವಿವೇಕ ಸರಿ ಇಲ್ಲದಿದ್ದಲ್ಲಿ ಜೀವನದಲ್ಲಿ ತಳಮಳ; ನೆಮ್ಮದಿ ಇಲ್ಲ. ಆದರೆ ಜ್ಞಾನಯೋಗದಿಂದ, ನಮ್ಮ ಶಕ್ತಿಯನ್ನು re-charge ಮಾಡಲು ಸಾಧ್ಯ.

ಕರ್ಮ, ಸಂಸ್ಕಾರ, ಒಬ್ಬರಿಗಿದ್ದಂತೆ ಮತ್ತೊಬ್ಬರಿಗಿರುವುದಿಲ್ಲ. ಏಕೆಂದರೆ ಅದನ್ನು ಹೆಚ್ಚು ಕಡಿಮೆ ಮಾಡಿಕೊಳ್ಳುವುದು ನಮ್ಮ ಕೈಯಲ್ಲಿದೆ.

**ಸಂಸ್ಕಾರದಲ್ಲಿ ಐದು ಬಗೆ:**

**೧. ಶಾಂತಿ, ಪ್ರೇಮ, ಪವಿತ್ರತೆ, ಆನಂದದೊಡಗೂಡಿದ ಸಂಸ್ಕಾರ**

**೨. ಪೂರ್ವ ಜನ್ಮದ ಸಂಸ್ಕಾರ**

**೩. ತಂದೆ-ತಾಯಿಯಿಂದ ಪಡೆದ ಸಂಸ್ಕಾರ**

**೪. ಸಂಗ ಮತ್ತು ವಾತಾವರಣದಿಂದ ಪಡೆಯುವ ಸಂಸ್ಕಾರ**

**೫. ಆಧ್ಯಾತ್ಮದಿಂದ, ಸತ್ಸಂಗದಿಂದ ನಾವು ಬದಲಾಯಿಸಿಕೊಳ್ಳಬಹುದಾದ ಸಂಸ್ಕಾರ**

ಪ್ರತಿಯೊಂದು, ಜೀವಿಯೂ ಈ ಪ್ರಪಂಚಕ್ಕೆ ಬರುವಾಗ, ಸಂಸ್ಕಾರದ ಮೂಟೆಯನ್ನು ಹೊತ್ತು ತರುವುದು. ಆದರೆ ಪರಮಾತ್ಮ ಅದರ ಜೊತೆಗೆ ವಿವೇಕ, ವಿಚಾರವೆಂಬ ಅಮೂಲ್ಯ ಶಕ್ತಿಯನ್ನೂ ಕರುಣಿಸಿರುವನು. ಅದನ್ನು ಸದುಪಯೋಗಪಡಿಸಿ, ಪರಿವರ್ತನೆ ಹೊಂದಲು ನಾವು ಈ ಜನ್ಮದಲ್ಲೇ ಪ್ರಯತ್ನಿಸಬೇಕು. ಇಂದ್ರಿಯ ನಿಗ್ರಹದ ಮೂಲದ ಅತೀಂದ್ರಿಯರಾಗಲು ಸಾಧ್ಯ ಹಾಗೂ ಜೀವನದ ಗುರಿಯಾದ ಸಾಕ್ಷಾತ್ಕಾರ ಹೊಂದಲು ಸಾಧ್ಯ.



# ಆಧ್ಯಾತ್ಮಿಕ ಸಂಭಾಷಣೆ

## ಸ್ವಾಮಿ ಭೂತೇಶಾನಂದಜಿಯವರೊಂದಿಗೆ

ಕನ್ನಡ ಅವತರಣಿಕೆ : ಸ್ವಾಮಿ ಮಂಗಳಾತ್ಮಾನಂದ



**ಶಾ**ಸ್ತ್ರಾರ್ಥದ ಮೇಲೆ ಸ್ವಲ್ಪ ಚರ್ಚೆ ನಡೆದ ಮೇಲೆ ಮಹಾರಾಜರು ಹೇಳಿದರು: '' 'ನಹಿ ನಹಿ ರಕ್ಷತಿ ಡುಕೃಙ್‌ಕರಣೇ' – ಇದೆಲ್ಲ ಜೀವನ ಕೊನೆಗಾಲದಲ್ಲಿ ಕೆಲಸಕ್ಕೆ ಬರುವುದಿಲ್ಲ, 'ನೋಡಿ, ಗಿಣಿ ಕ್ಯಾಂ, ಕ್ಯಾಂ ಅಂತ ಕಿರುಚಿದ ಹಾಗೆ' ಎಂದು ಠಾಕೂರ್ ಹೇಳುತ್ತಿದ್ದರು.ಒಂದೊಂದೇ ದಿನಗಳು ಕಳೆದುಹೋಗುತ್ತಿವೆ, ಆ ದಿನಕ್ಕಾಗಿ ತಯಾರಿ ಮಾಡಿ. ಇಷ್ಟೊಂದು protected place(ಸುರಕ್ಷಿತ ಸ್ಥಳ) ಇನ್ನೆಲ್ಲಿಯೂ ಸಿಗಲಾರದು'' ಎಂದರು. ಹೀಗಿರುವಾಗ ದಾನದ ವಿಚಾರ ಬಂತು.

**ಪ್ರಶ್ನೆ:** ಮಹಾರಾಜ್ ನಾವು ದಾನ ಮಾಡಬಹುದೆ?

**ಮಹಾರಾಜ್:** (ತನ್ನ ಹೃದಯ ಸ್ಪರ್ಶ ಮಾಡಿ) ಇದನ್ನು ನಾವು ದಾನ ಮಾಡಬಲ್ಲೆವು. ಹೃದಯ ನೀಡಬಲ್ಲೆವು. ಹೃದಯವನ್ನು ನೀಡುವುದೆಂದರೆ ಮಹಾನುಭೂತಿ (ಸರ್ವಭೂತಗಳಲ್ಲಿಯ ಕರುಣೆ), fellow-feeling. ಕಾರಣ, ಇದೊಂದೆ ನಮ್ಮದು, ನಮ್ಮ ಸ್ವಂತದ್ದು.

**ಪ್ರಶ್ನೆ:** ಮಹಾರಾಜ್, ಅಧ್ಯಯನ ಮತ್ತು ಸಾಧುಜೀವನ ಇವುಗಳನ್ನು ಹೇಗೆ ಸಮತೋಲನ ಮಾಡಿಕೊಂಡು ಹೋಗಬಹುದು?

**ಮಹಾರಾಜ್:** ಅಧ್ಯಯನದ ಉದ್ದೇಶ, ಸಾಧುಜೀವನದ ಅಡಿಪಾಯವನ್ನು ಗಟ್ಟಿ ಮಾಡಿಕೊಳ್ಳುವುದು, ಪಂಡಿತನಾಗುವುದಲ್ಲ. ಇದನ್ನು ನೆನಪಿಡಬೇಕು. ಸಾಧು ಜೀವನಕ್ಕೆ ಸಹಾಯ ಮಾಡಲೆಂದೇ ಅಧ್ಯಯನವಿದೆ. ಪಂಡಿತರ ಅಧ್ಯಯನಕ್ಕೂ ಸಾಧುಜೀವನಕ್ಕೂ ಸಂಬಂಧವೇ ಇಲ್ಲ, ನಮ್ಮ ಜೀವನದಲ್ಲಿ ಸಾಧುತ್ವವೇ ಮುಖ್ಯ ಗುರಿ. ಇದು ಪಂಡಿತರ ಉದ್ದೇಶವೆ? ಅವರ ಗುರಿ ಪಾಂಡಿತ್ಯ, ಅಷ್ಟೆ. ಅಧ್ಯಯನ ಅವರ ಜೀವನಕ್ಕೆ ಆವಶ್ಯಕವೋ ಇಲ್ಲವೋ ಎಂದು ಅವರು ಯೋಚಿಸುವುದಿಲ್ಲ.

**ಪ್ರಶ್ನೆ:** ಶಾಸ್ತ್ರದಲ್ಲಿ ಗುರುಸೇವೆ ಬಗ್ಗೆ ತುಂಬಾ ಹೇಳಿದೆ. ಆದರೆ ನಮ್ಮ ಸಂಘ ಈಗ ಎಷ್ಟೊಂದು ಬೆಳೆದಿದೆ ಎಂದರೆ, ಪ್ರತಿಯೊಬ್ಬರಿಗೂ ಗುರುಸೇವೆ ಮಾಡುವ ಸುಯೋಗ ಬರುವುದಿಲ್ಲ, ಹೀಗಿರುವಾಗ ನಮ್ಮ ಕರ್ತವ್ಯವೇನು?

**ಮಹಾರಾಜ್:** ಸಂಘಸೇವೆಯೇ ಗುರುಸೇವೆ. ಶ್ರೀರಾಮಕೃಷ್ಣರ ದೇಹವೇ ಈ ಸಂಘ ಎಂದು ಸ್ವಾಮೀಜಿ ಹೇಳಿದ್ದಾರೆ. ಹಾಗಾಗಿ ಸಂಘ ಸೇವೆಯೇ ಇಷ್ಟ ಮತ್ತು ಗುರುವಿನ ಸೇವೆ.

**ಪ್ರಶ್ನೆ:** ತಾವು ಸಂಘ ಸೇರಿದಾಗ, ಮತ್ತು ಈಗ ಸಂಘದಲ್ಲಿ ಏನಾದರೂ ಪರಿವರ್ತನೆ ಆಗಿದೆಯೆ?

**ಮಹಾರಾಜ್:** ಪರಿವರ್ತನೆ ಎಂದು ಹೇಳುವುದು ಕಷ್ಟ, ನಾವು ಕೂಡ ಈ ಪ್ರವಾಹದ ಜೊತೆ ಎಲ್ಲಿಂದ ಎಲ್ಲಿಗೆ ಹೋಗುತ್ತಿದ್ದೇವೆ, ಗುರಿ ಏನು, ಅಥವಾ ಆರಂಭವೆಲ್ಲಿ – ಇದನ್ನು ಹೇಳುವುದು ಬಹಳ ಕಷ್ಟ. ಎಲ್ಲರೂ ಈ ಪ್ರವಾಹದಲ್ಲಿ ಈಜಿಕೊಂಡು ಹೋಗುತ್ತಿದ್ದೇವೆ.

**ಪ್ರಶ್ನೆ:** ಹಾಗಾದರೆ ಸ್ವಲ್ಪ ಪರಿವರ್ತನೆ ಆಗಿದೆ, ಇದರ ಸಂಬಂಧ ತಾವು ಏನು ಹೇಳುತ್ತೀರಿ?

**ಮಹಾರಾಜ್:** ಪರಿವರ್ತನೆ ಮಾಡುತ್ತಿದ್ದೇವೆ ಎಂದು ಹೇಳು.

**ಪ್ರಶ್ನೆ:** ಹಾಗಲ್ಲ ಮಹಾರಾಜ್, ತಾವು ನೋಡುತ್ತಿದ್ದೀರಿ, ಆಗ ಮತ್ತು ಈಗ – ತಾವೇ ಹೇಳಿ, ಏನಾದರೂ ಪರಿವರ್ತನೆ ಆಗಿದೆಯೆ?

**ಮಹಾರಾಜ್:** ಒಂದು ಪರಿವರ್ತನೆಯನ್ನು ನೋಡುತ್ತಿದ್ದೇನೆ, ಅದೇ ಜಪಧ್ಯಾನಗಳು ಕ್ರಮೇಣ ಅಮುಖ್ಯವಾಗುತ್ತದೆ. ಒಂದೇ ಸಲ ಎಲ್ಲ ಕಡಿಮೆಯಾಗುತ್ತದೆ ಎಂದೂ ಹೇಳಲಾಗುವುದಿಲ್ಲ, ಆದರೆ ನಿಧಾನ ಗತಿಯಲ್ಲಿ, ಈ ವಿಚಾರದಲ್ಲಿ ನಾವು ಹೆಚ್ಚಿನ ನಿಗಾ ಇಡಬೇಕಾಗಿದೆ.

**ಪ್ರಶ್ನೆ:** ಅನಂತರ?

**ಮಹಾರಾಜ್:** ಇನ್ನೂ ಒಂದು ನಡೆಯುತ್ತಿದೆ, ಈಗ discipline (ನಿಯಮ) ಹೆಚ್ಚಾಗುತ್ತಿದೆ. ಹಿಂದೆ discipline ಇಷ್ಟಿರಲಿಲ್ಲ. ಆಗ ತುಂಬಾ ಜನ ಸಾಧುಗಳು ಹೊರಗಡೆ ಹೋಗಿ ತಿರುಗಾಡಿಕೊಂಡು ಬರುತ್ತಿದ್ದರು. ಈಗ ಹಾಗೆ ಮಾಡಿದರೆ, ಸರಿಯಾದ ವಿವರಣೆ ನೀಡಬೇಕಾಗುತ್ತದೆ. ಆಗ ಇವುಗಳ ಆವಶ್ಯಕತೆ ಇರಲಿಲ್ಲ.

**ಪ್ರಶ್ನೆ:** ಇದು positive ಅಥವಾ negative ಅಂಶವೆ?

**ಮಹಾರಾಜ್:** ಒಂದು ಲೆಕ್ಕದಲ್ಲಿ positive. ಇನ್ನೊಂದು ದಿಕ್ಕಿನಿಂದ ನೋಡಿದರೆ, negative ಎಂದೂ ಹೇಳಬಹುದು. ಯಾವ ಉದ್ದೇಶಕ್ಕಾಗಿ ಇಲ್ಲಿ ಬಂದಿದ್ದೇವೋ ಅದನ್ನು ಅಲಕ್ಷಿಸಿದರೆ negative. ಯಾರು ಈ ಜ್ವಲಂತ ತಪಸ್ಸಿನ ಬೇಗೆಯನ್ನು ಇಟ್ಟುಕೊಂಡಿದ್ದಾರೋ ಅವರು ಭಾಗ್ಯವಂತರು. ಎಲ್ಲರೂ ಸಾಕ್ಷಾತ್ಕಾರ ಪಡೆಯುತ್ತಾರೆ, ಆದರೆ ಅದನ್ನು ಹೊಂದಲು ಅಂಥ ಮಾನಸಿಕ ತಯಾರಿ ಬೇಕು. ಅದನ್ನು ನಮ್ಮ ಮನಸ್ಸಿನಲ್ಲಿಡಬೇಕು. ನಮ್ಮ ಆದರ್ಶದ ಬಗ್ಗೆ ಪ್ರಜ್ಞೆ ಕಡಿಮೆಯಾಗುತ್ತದೆ. ಇದಕ್ಕಾಗಿ struggle ಹೆಚ್ಚುತ್ತಿದೆ. ಆಗ ಆದರ್ಶವಿತ್ತು, ಆದರ್ಶ ಜೀವನ ನಮ್ಮ ಮುಂದಿತ್ತು. ಎಲ್ಲರೂ ಆ ಆದರ್ಶದಿಂದ ಪ್ರೇರಿತರಾಗಿ, ತಮ್ಮ ಆಧ್ಯಾತ್ಮಿಕ ಪ್ರಣಾಳಿಯನ್ನು ತಯಾರು ಮಾಡಲು ಪ್ರಯತ್ನಿಸಿದ್ದರೆಂದು ಯೋಚಿಸಿದರೆ ಅದೂ ತಪ್ಪು. **'ಮನುಷ್ಯಾಣಾಂ ಸಹಸ್ರೇಷು ಕಶ್ಚಿತ್ ಯತತಿ ಸಿದ್ಧಯೇ'** – ಸಿದ್ಧಿಗಾಗಿ ಕೆಲವರಷ್ಟೆ ಪ್ರಯತ್ನಿಸುತ್ತಾರೆ. ಇದು ಬಹಳ ಪ್ರಾಚೀನವಾದ, ಗೀತೆಯ ವಿಚಾರ. ಈಗ ನಾವು ಇಂತಹ ತಪಸ್ವಿಗಳನ್ನೇ ಅಪೇಕ್ಷಿಸುವುದು. ನೀವೇನೋ ಹೇಳುತ್ತೀರಿ, ಎಲ್ಲ recruit ಗಳನ್ನು ಸರಿಯಾಗಿ ನೋಡಿ ಮಾಡಬೇಕು ಎಂದು. ಆದರೆ ಅಷ್ಟೊಂದು ಶುಕದೇವರುಗಳು ಈಗ ನಮಗೆಲ್ಲಿ ಸಿಗುತ್ತಾರೆ?

**ಪ್ರಶ್ನೆ:** ಅನೇಕರು ಹೇಳುತ್ತಾರೆ, ಅವರ ಕಾಲದಲ್ಲಿ ಎಲ್ಲವೂ ಬಹಳ ಚೆನ್ನಾಗಿತ್ತು, ಈಗೆಲ್ಲ ಕೆಟ್ಟುಹೋಗಿದೆ – ಎಂದು.

**ಮಹಾರಾಜ್:** ಅದು ಹೇಗೆಂದರೆ, ನದಿಯ ಈ ತೀರದಿಂದ ನೋಡಿದಾಗ ಆ ತೀರ ಬಹಳ ಚೆನ್ನಾಗಿದೆ ಎಂದ ಹಾಗೆ. (ಕನ್ನಡದಲ್ಲಿ 'ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ' ಎಂದ ಹಾಗೆ – *ಅನುವಾದಕ*)

**ಪ್ರಶ್ನೆ:** ಹಾಗಾದರೆ, ಇನ್ನೂ ಹತಾಶೆಯ ಸ್ಥಿತಿ ಬಂದಿಲ್ಲ, ಅಲ್ಲವೆ?

**ಮಹಾರಾಜ್:** ಹತಾಶೆ ಆದರೆ ಆಗುತ್ತದೆ, ಅದು ಹೊರಟೂ ಹೋಗುತ್ತದೆ. ಏಕೆ ಹತಾಶೆಯಾಗಬೇಕು? ಭರವಸೆ ಇದೆ. ಆದರೆ ಹಂಬಲ ಕಡಿಮೆಯಾಗಿದೆ. ಏನೋ ಪರಂಪರೆಯಿಂದ ಬಂದದ್ದು ಕಿಂಚಿತ್ ಮಾಡಿ ದಿನಗಳೆಯುತ್ತಿದ್ದಾರೆ. ಆದರೂ ಹತಾಶರಾಗುವುದು ಬೇಡ.

ಮಲಗಿರುವಾಗ ಪ್ರಣಾಮ ಮಾಡಬಹುದೆ, ಎನ್ನುವುದರ ಬಗ್ಗೆ ಚರ್ಚೆ ನಡೆದಾಗ, ''ಎಷ್ಟೋ ಜನ, ಮಲಗಿರುವಾಗ ಪ್ರಣಾಮ ಮಾಡಬಹುದೆ? ಎಂದು ಕೇಳುತ್ತಾರೆ. ಯಾಕೆ ಮಾಡ ಬಾರದು? ನನಗೆ ಅದೆಲ್ಲ ಇಲ್ಲ. ಮಲಗಿದ್ದಾಗ ಜನ ಪ್ರಣಾಮ ಮಾಡಬಯಸುವುದಿಲ್ಲ. ಕಾರಣ, ಶವದ ಹಾಗೆ ಇರುತ್ತಾರೆಂದು. ಆದರೆ ಸಂನ್ಯಾಸಿ ಮೃತನೆ? ಅವನ ಶರೀರವೇ ಮೃತಶರೀರ. ಸಂನ್ಯಾಸಿಯು ದೇಹವನ್ನು ಮೃತವೆಂದೇ ಭಾವಿಸುತ್ತಾನೆ. ಮೃತಶರೀರದಲ್ಲಿ 'ನಾನು' ಎಂಬ ಬುದ್ಧಿ ಇರುವುದಿಲ್ಲ, ಹಾಗೆ ಸಂನ್ಯಾಸಿ ತನ್ನ ಶರೀರವನ್ನು ಶವವೆಂದೇ ಭಾವಿಸುತ್ತಾನೆ. ಶ್ರಾದ್ಧಾದಿಗಳಾದ ಮೇಲೆ ಸಂನ್ಯಾಸಿ ವಿದೇಹಿ. ಆತನಿಗೆ ಶರೀರವೆಲ್ಲಿಯದು?

**ಪ್ರಶ್ನೆ:** ಮಹಾರಾಜ್, ಜಪ ಮಾಡುವಾಗ ಏಕೆ ನಿದ್ದೆ ಬರುತ್ತದೆ? ಇದನ್ನು ಹೇಗೆ ದೂರ ಮಾಡಬಹುದು?

**ಮಹಾರಾಜ್:** ಹೌದು, ಯೋಗದಲ್ಲಿ ಇದೊಂದು ವಿಘ್ನ, ಪರಮ ಶತ್ರು. ನಿದ್ದೆ ಬಂದರೆ ಕಣ್ಣಿಗೊಂದಷ್ಟು ನೀರು ಹಾಕಿಕೊಂಡರೆ ಆಯಿತು. ಅದೂ ಕೆಲವು ಕ್ಷಣಗಳವರೆಗೆ ಮಾತ್ರ ಸಹಾಯ. ನಿದ್ದೆಗೆ ಕಾರಣ – ಮನಸ್ಸು ಸಾಮಾನ್ಯವಾಗಿ ತಿರುಗಾಡುತ್ತಿರುತ್ತದೆ, ಧ್ಯಾನದಲ್ಲಿ ಮನಸ್ಸನ್ನು ಎಲ್ಲದರಿಂದಲೂ ಹಿಂದಿರುಗಿಸಲಾಗುತ್ತದೆ. ಆದರೆ ಅದನ್ನು ಧ್ಯೇಯವಸ್ತುವಿನ ಮೇಲೆ ಕೇಂದ್ರೀಕರಿಸಲಾಗದಿದ್ದರೆ, ಬೇರೆ ಉಪಾಯ ಕಾಣದೆ ಅದು ನಿದ್ದೆಗೆ ಶರಣು ಹೋಗುತ್ತದೆ. ಇದಕ್ಕೊಂದೇ ದಾರಿ, ಸರ್ವದಾ ಪ್ರಯತ್ನಮಾಡಿ ಪ್ರಜ್ಞೆಯನ್ನು ಜಾಗೃತ ಸ್ಥಿತಿಯಲ್ಲಿಡುವುದು.

**ಪ್ರಶ್ನೆ:** ಪ್ರಯತ್ನ ಮಾಡುತ್ತೇನೆ, ಆದರೆ ಯಾವಾಗಲೋ ನಿದ್ದೆ ಬಂದುಬಿಡುತ್ತದೆ. ಇದಕ್ಕೇನು ಮಾಡಬೇಕೆಂದೇ ತೋಚುವುದಿಲ್ಲ.

**ಮಹಾರಾಜ್:** ಯಾವ ವಸ್ತುವಿನ ಮೇಲೆ ಧ್ಯಾನ ಮಾಡುತ್ತೇನೋ, ಆ ವಸ್ತುವಿನ ಮೇಲೆ ಹೆಚ್ಚು ತೀವ್ರತೆ, ಅರ್ಥಾತ್ ಪಡೆದೇ ತೀರುತ್ತೇನೆಂಬ ಮಹತ್ವಾಕಾಂಕ್ಷೆ ಇದ್ದರೆ, ಆಗ ಎಚ್ಚರಿಕೆ ಕಳೆದುಕೊಳ್ಳಲು ಸಾಧ್ಯವೆ? ಪಕ್ಕದ ಕೊಠಡಿಯಲ್ಲಿ ವಜ್ರವೈಢೂರ್ಯಗಳಿವೆ ಎಂದು ಗೊತ್ತಾದರೆ, ಕಳ್ಳನಿಗೆ ಮಲಗಿ ನಿದ್ದೆಮಾಡಲು ಸಾಧ್ಯವೆ? ಇಲ್ಲ, ಹೇಗಾದರೂ ಮಾಡಿ ಪೆಟ್ಟಿಗೆ ಒಡೆದು, ಸಂಪತ್ತನ್ನು ಅಪಹರಿಸುವವರೆಗೂ ನಿಶ್ಚಿಂತೆಯಿಂದ ಇರಲು ಅವನಿಗೆ ಸಾಧ್ಯವೇ ಇಲ್ಲ. ಹಾಗೆ ನಮ್ಮ ಹೃದಯದಲ್ಲಿ ಭಗವಂತನಿದ್ದಾನೆಂದು ಗೊತ್ತಾದರೆ, ಆತನನ್ನು ಪಡೆಯುವತನಕ ನಮ್ಮಿಂದ ಅಜಾಗರೂಕರಾಗಿರಲು ಸಾಧ್ಯವೆ? ನಿದ್ರಿಸಲು ಸಾಧ್ಯವೆ?

**ಪ್ರಶ್ನೆ:** ವ್ಯಾಕುಲತೆಯ ಅಭಾವದಿಂದ ಈ ತರ ಆಗುವುದೆ?

**ಮಹಾರಾಜ್:** ಅದಲ್ಲದೆ ಇನ್ನೇನು? ಆದ್ದರಿಂದಲೇ ಸದಾ ಜಾಗರೂಕನಾಗಿರಲೆತ್ನಿಸಬೇಕು. ಹೀಗೆ ಅದು ಅಭ್ಯಾಸವಾಗಿ, ಸಂಸ್ಕಾರ ಬರುತ್ತದೆ.

**ಪ್ರಶ್ನೆ:** ನಿದ್ದೆ ಬರುವಾಗ ನಡೆದಾಡಿಕೊಂಡು ಜಪ ಮಾಡಿದರೆ ಹೇಗೆ?

**ಮಹಾರಾಜ್:** ಮಾಡಬಹುದು, ಆದರೆ ಅದರಿಂದ ನಿದ್ದೆಯನ್ನು ಓಡಿಸಿದ ಹಾಗೂ ಆಗುವುದಿಲ್ಲ, ಧ್ಯಾನವಂತೂ ಬಹುದೂರದ ಮಾತು. ಧ್ಯಾನವೆಂದರೆ ಎಲ್ಲ ಇಂದ್ರಿಯಗಳಿಗೆ ವಿಶ್ರಾಂತಿ ನೀಡುವುದು. ಆಗ ಮನಸ್ಸು ಧ್ಯೇಯವಸ್ತುವನ್ನಷ್ಟೇ ಚಿಂತಿಸುತ್ತದೆ. ನಡೆದಾಡಿದರೆ ಅದರಿಂದ ಧ್ಯಾನವಾಗುವುದಿಲ್ಲ.

**ಪ್ರಶ್ನೆ:** ಮಹಾರಾಜ್, ಕೆಲಸದ ಒತ್ತಡ ಇರುವಾಗೇನು ಮಾಡಬೇಕು?

**ಮಹಾರಾಜ್:** ಸಿಕ್ಕಿದಷ್ಟು ಸಮಯದಲ್ಲಿ ಭಾವದಿಂದ ಸಾಧನೆಮಾಡಲು ಪ್ರಯತ್ನಮಾಡಬೇಕು. ಇಲ್ಲಿ ಭಾವವೇ ಮುಖ್ಯ. ಒಂದು ಭಾವದಿಂದ ಮಾಡಿದರೆ, ಅಷ್ಟು ಸಮಯ ಸದುಪಯೋಗವಾಗುತ್ತದೆ. ಮನಸ್ಸು ಶಾಂತವಾಗದಿದ್ದರೆ, ನಮಗೇನು ಬೇಕೋ ಅದನ್ನೆಲ್ಲ ಮಾಡಲಾಗುವುದಿಲ್ಲ. ಮನಸ್ಸನ್ನು ವಿಶ್ಲೇಷಣೆ ಮಾಡಿನೋಡಲಾಗುವುದಿಲ್ಲ. ಕಠೋಪನಿಷತ್ತಿನಲ್ಲಿ,

**ಅಂಗುಷ್ಠ ಮಾತ್ರಃ ಪುರುಷೋಽಂತರಾತ್ಮಾ**
**ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ।**
**ತಂ ಸ್ವಾಚ್ಛರೀರಾತ್ ಪ್ರವೃಹೇತ್**
**ಮುಂಜಾದಿವೇಷೀಕಾಂ ಧೈರ್ಯೇಣ ॥** *(೨.೩.೧೭)*

ಮುಂಜವೆಂಬ ಹುಲ್ಲಿನಿಂದ ದಂಟನ್ನು ಬೇರ್ಪಡಿಸಬೇಕೆಂದರೆ, ಅದನ್ನು ಸರಕ್ಕೆಂದು ಎಳೆದರೆ ತುಂಡಾಗುತ್ತದೆ. ಬಹಳ ಎಚ್ಚರಿಕೆಯಿಂದ, ನಿಧಾನವಾಗಿ ಹುಲ್ಲಿನ ಎಳೆಯನ್ನು ಬೇರ್ಪಡಿಸಬೇಕು. ಈ ಶ್ಲೋಕದಲ್ಲಿ ಆತ್ಮನನ್ನು ದೇಹದಿಂದ ಬೇರ್ಪಡಿಸುವುದನ್ನೇ ಹೇಳಿದೆ. ಧ್ಯಾನ ಮಾಡುವಾಗ ಹೀಗೆ ಮನಸ್ಸನ್ನು ಯಾವುದರ ಮೇಲೆ ಸ್ಥಿರ ಮಾಡಬೇಕೋ, ಅದನ್ನು ಬಿಟ್ಟು ಬೇರೆ ಎಲ್ಲ ವಿಚಾರಗಳಿಂದಲೂ ಬೇರ್ಪಡಿಸಿ, ಇಷ್ಟ ದೇವರ ಮೇಲೆ ನಿಲ್ಲಿಸಬೇಕು. ಗೀತೆಯಲ್ಲಿ ಹೀಗೆ ಹೇಳಿದೆ:

**ಶನೈಃ ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ।**
**ಆತ್ಮಸಂಸ್ಥಂ ಮನಃಕೃತ್ವಾ ನ ಕಿಂಚಿದಪಿ ಚಿಂತಯೇತ್ ॥**
**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥** *(೬.೨೫–೨೬)*

**ಶನೈಃ ಶನೈಃ** –'ಬಹಳ ನಿಧಾನವಾಗಿ' ಎಂದು ಹೇಳಿದೆ. ಸಮಾಧಿಗಾಗಿ ಪ್ರಯತ್ನ. ಈ ಅವಸ್ಥೆ ಬರಬೇಕಾದರೆ, ಮನಸ್ಸನ್ನು ಶಾಂತಗೊಳಿಸಿ, ಆ ದಾರಿಯಲ್ಲಿ ಮುಂದುವರಿಯಬೇಕು. ಮನಸ್ಸನ್ನು ಶಾಂತಮಾಡದೆ ಧ್ಯಾನ ಸಾಧ್ಯವೇ ಇಲ್ಲ. ಮನಸ್ಸು ಶಾಂತವಾದರೆ, ಜೀವನದಲ್ಲಿ ಅದರ ಸೂಚನೆಗಳನ್ನು ನೋಡಬಹುದು. ಚಲನವಲನಗಳು ಶಾಂತವಾಗುತ್ತವೆ, ಜೀವನವೇ ಶಾಂತಸ್ವಭಾವಕ್ಕೆ ಬರುತ್ತದೆ. ಆತನ ವ್ಯವಹಾರದಲ್ಲಿ ಮೃದುತ್ವ ಬರುತ್ತದೆ. ಕೀರ್ತನೆ ಮಾಡುವವರು ತಾಳ ಮೃದಂಗಗಳೊಂದಿಗೆ ಅತಿಯಾಗಿ ಕುಣಿದು, ಕುಪ್ಪಳಿಸಿ, ಬಳಲಿ ಬೆಂಡಾಗಿ ಹೋಗುತ್ತಾರೆ. ಆದರೆ ಧ್ಯಾನಿಗೆ ಇವೆಲ್ಲ ರುಚಿಸದು. ಠಾಕೂರರ ಜೀವನದಲ್ಲಿ ಎರಡನ್ನೂ ನಾವು ನೋಡಬಹುದು. ಯಾವಾಗ ಕುಣಿಯುತ್ತಾರೋ, ಅದೇನು ಸಿಂಹನೃತ್ಯ! ಜೊತೆಯವಲ್ಲಿ ಹಾಡುವವರು, ಬಾರಿಸುವರು ಅಕ್ಕಪಕ್ಕದಲ್ಲಿದ್ದು ನೋಡುವವರೂ ಕೂಡ ಕುಣಿದು ಬೆವರು ಸುರಿಸುತ್ತಿದ್ದರು. ಇನ್ನೊಂದೆಡೆ ಅವರದು ಶಾಂತಸ್ವಭಾವ. ಎರಡೂ ಅವಸ್ಥೆಯಲ್ಲಿ ಅವರು ಪರಾಕಾಷ್ಠೆಗೇರುತ್ತಿದ್ದರು. ಆದ್ದರಿಂದ ಎರಡನ್ನೂ ತೋರಿಸಿ ಕೊಡುತ್ತಿದ್ದರು.

**ಪ್ರಶ್ನೆ:** ಠಾಕೂರ್ ವಿಭಿನ್ನ ಪದ್ಧತಿಗಳಲ್ಲಿ ಸಾಧನೆ ಮಾಡುವಾಗ, ವಿವಿಧ ಭಾವಗಳಲ್ಲಿ ಅವರ ಶರೀರಧರ್ಮವೂ ಪರಿವರ್ತನೆ ಹೊಂದುತ್ತಿತ್ತು–ಸ್ವಾಮಿ ಶಾರದಾನಂದರು ಉಲ್ಲೇಖಿಸುತ್ತಾರೆ. ಮನಸ್ಸಿನಲ್ಲಿ ಶರೀರ ಸೃಷ್ಟಿ ಮಾಡುತ್ತಿದ್ದರೆಂದು ನಮಗನ್ನಿಸುತ್ತದೆ. ಇದರ ಅರ್ಥವೇನು?

**ಮಹಾರಾಜ್:** ಸಾಮಾನ್ಯ ವಿಚಾರವನ್ನೇ ತೆಗೆದುಕೊಳ್ಳಿ, ಯಾರ ಮನಸ್ಸು ಮೃದುವೋ ಅವರ ಶರೀರವೂ ಮೃದು; ಯಾರ ಮನಸ್ಸು ಕಠೋರವೋ, ಅವರ ಶರೀರವೂ ಕಠಿಣವಾಗಿರುತ್ತದೆ. ಮನಸ್ಸಿನ ಪ್ರಭಾವವೇ ಶರೀರದ ಮೇಲೂ ಆಗುತ್ತದೆ. ಮನಸ್ಸು ಮತ್ತು ಶರೀರ, ಪರಸ್ಪರ ಅವಲಂಬಿತವಾಗಿವೆ. ಯಾರು ಭಕ್ತಿ ಭಾವದಿಂದ ಸಾಧನೆ ಮಾಡುತ್ತಾರೋ ಅವರು ಆಹಾರಾದಿಗಳಲ್ಲಿ ಕೂಡ ವಿಶೇಷ ನಿಗಾ ವಹಿಸಬೇಕಾಗುತ್ತದೆ. ✷

# ಅಧ್ಯಾಪಕರಿಗೊಂದು ಹಿತನುಡಿ

**ಡಾ. ಎಲ್.ಸಿ.ಎಸ್. ಮೂರ್ತಿ**

ಆಧುನಿಕ ಸನ್ನಿವೇಶದಲ್ಲಿ ಶೈಕ್ಷಣಿಕ ಕ್ಷೇತ್ರದಲ್ಲಿ ನಮ್ಮ ಸಾಂಸ್ಕೃತಿಕ, ಆಧ್ಯಾತ್ಮಿಕ ಮೌಲ್ಯಗಳು ಕಳೆದು ಹೋಗುತ್ತಿರುವಂತೆ ಕಂಡು ಬಂದರೂ, ಹೇಗೆ ಅವು ವಿದ್ಯಾರ್ಥಿಗಳಿಗೆ ಉನ್ನತ ಜೀವನವನ್ನು ಕಂಡುಕೊಳ್ಳುವಲ್ಲಿ ಅತ್ಯಗತ್ಯವಾಗಿವೆ ಎಂಬ ಅಂಶವನ್ನು ಚರ್ಚಿಸಿರುವ ಲೇಖಕರು ಬೆಂಗಳೂರು ವಿಶ್ವವಿದ್ಯಾನಿಲಯದ ನಿವೃತ್ತ ಭೌತಶಾಸ್ತ್ರ ಪ್ರಾಧ್ಯಾಪಕರು.



**ಭಾ**ರತೀಯ ಸಂಸ್ಕೃತಿ ಮಾತೃ ದೇವೋಭವ, ಪಿತೃದೇವೋಭವ, ಆಚಾರ್ಯದೇವೋ ಭವ ಎಂದು ಬೋಧಿಸಿದ ಶ್ರೇಷ್ಠ ಸಂಸ್ಕೃತಿ. ಇದನ್ನು ಅನುಷ್ಠಾನಕ್ಕೆ ತಂದವನೇ ಆಚಾರ್ಯ. ಮಿಗಿಲಾಗಿ, ನಮ್ಮ ವೇದೋಪನಿಷತ್ತುಗಳು ಆಚಾರ್ಯರನ್ನು ಗುರು ಎಂದು ಪರಿಗಣಿಸಿವೆ, ಸಾಕ್ಷಾತ್ ಪರಬ್ರಹ್ಮನ ಸ್ಥಾನವನ್ನು ಗುರುವಿಗೆ ಕೊಟ್ಟಿವೆ. ಅದೇ ಗುರುವಿನ ಸ್ಥಾನವನ್ನು ಶಿಕ್ಷಕರಿಗೂ ನೀಡಲಾಗಿದೆ. ಇಂದು ಅಂತಹ ಗುರುವಿನ ಸ್ಥಾನ ಲಘುವಾಗಿ ಅಪಹಾಸ್ಯಕ್ಕೆ ಈಡಾಗುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ವಿದ್ಯಾರ್ಥಿಗಳಿಗೆ ಅಧ್ಯಾಪಕರ ಮೇಲೆ ಗೌರವವಿಲ್ಲ ಎಂಬ ಮಾತುಗಳು ಎಲ್ಲೆಲ್ಲೂ ಕೇಳಿಬರುತ್ತಿದೆ. ಇದು ಸಮಾಜದ ಮುಂದಿನ ಭವಿಷ್ಯವನ್ನು ಕರಾಳವನ್ನಾಗಿಸುತ್ತದೆ. ಇಂದು ವಿದ್ಯೆ ಬರೀ ಪಾಸು ಮಾಡುವ ವಿದ್ಯೆಯಾಗಿದೆ. ಅದು ಪದವಿ ಪಡೆಯುವುದಕ್ಕೆ ಮಾತ್ರ ಪೂರಕವಾಗಿದೆ. ಈ ಕಾಲದ ಅಧ್ಯಾಪಕರು ವಿದ್ಯಾರ್ಥಿಗಳು ದಾರಿ ತಪ್ಪಿದಾಗ ಸರಿಯಾದ ಮಾರ್ಗದರ್ಶನ ನೀಡಲಾಗುತ್ತಿಲ್ಲ. ಕಾರಣ ಬೋಧಿಸುವ ಪಠ್ಯಕ್ರಮದಲ್ಲಿ ಮಾರ್ಗದರ್ಶನ ಕೊಡುವಂತಹ ವಿಷಯಗಳಿರುವುದಿಲ್ಲ. ಆತ್ಮವಿಶ್ವಾಸ, ಆತ್ಮಗೌರವ, ಸಹನೆ, ಸರಳ ಜೀವನದ ವಿಧಾನಗಳು ಮುಂತಾದ ಗುಣಮೌಲ್ಯಗಳನ್ನು ಸೇರಿಸಿ ಬೋಧಿಸುವ ಸಾಮರ್ಥ್ಯ ಅಧ್ಯಾಪಕರಲ್ಲಿ ಇಲ್ಲದೇ ಇರುವುದೇ ಇದಕ್ಕೆ ಕಾರಣ. ಹೀಗಾಗಿ ಈಗಿನ ಅಧ್ಯಾಪಕರೇ ದಾರಿ ತಪ್ಪುತ್ತಿದ್ದಾರೆ. ವಿದ್ಯಾರ್ಥಿಗಳು ಅಧ್ಯಯನ ಮಾಡುವ ಬೇರೆ ಬೇರೆ ವಿಷಯಗಳನ್ನು ಬೋಧಿಸುವಾಗ ಮೌಲ್ಯಗಳನ್ನು ಸೇರಿಸಿ ಬೋಧಿಸುವ ವಿಧಾನವನ್ನು ಪಠ್ಯದಲ್ಲಿ ರೂಪಿಸಬೇಕಾಗಿದೆ.

ಇಂದು ಅಧ್ಯಾಪಕರು ಬೋಧಿಸುವ ಕ್ರಮ ಮತ್ತು ವಿದ್ಯಾರ್ಥಿಗಳು ಕಲಿಯುವ ಕ್ರಮ ಕೃತಕವೂ ಮತ್ತು ಪ್ರದರ್ಶನ, ಪ್ರತಿಷ್ಠೆಗಳಿಂದ ಕೂಡಿದೆ. ಇದು ವಿದ್ಯಾಕ್ಷೇತ್ರದಲ್ಲಿ ಕಂಡುಬರುವ ಗಂಭೀರ ಸಮಸ್ಯೆಯಾಗಿದೆ.

'ಇಂದು ವಿಜ್ಞಾನವನ್ನು ಕಲಿಸುವ ಅಧ್ಯಾಪಕರಲ್ಲಿ ವೈಚಾರಿಕ ಮತ್ತು ವೈಜ್ಞಾನಿಕ ಮನೋಧರ್ಮ ಕುಂಠಿತವಾಗಿದೆ. ಎಷ್ಟೋ ಭೌತಶಾಸ್ತ್ರ ಮತ್ತು ರಸಾಯನಶಾಸ್ತ್ರ ಉಪನ್ಯಾಸಕರು ವಿಜ್ಞಾನ ಪಾಠವನ್ನು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಸಮರ್ಪಕವಾಗಿ ಬೋಧಿಸಿದರೂ ಅವರಲ್ಲಿ ಮೂಢನಂಬಿಕೆಗಳು ಇನ್ನೂ ಹೋಗಿಲ್ಲ. ಅವರು ಭೌತಶಾಸ್ತ್ರ ಮತ್ತು ರಸಾಯನಶಾಸ್ತ್ರಗಳ ಭಾರಿ ಸರಕನ್ನು ಸಮರ್ಥವಾಗಿ ಹೊರುವ ಹೇಸರಗತ್ತೆಗಳಾಗುತ್ತಾರೆಯೇ ಹೊರತು ವಿಚಕ್ಷಣ ಸಂಪನ್ನರಾದ ವಿಚಾರಮತಿಗಳಾಗುವುದಿಲ್ಲ' ಎಂದು ರಾಷ್ಟ್ರಕವಿಗಳಾದ ಕುವೆಂಪುರವರು ನುಡಿದಿದ್ದಾರೆ. ಅಂದರೆ ಪ್ರಪಂಚ ಸಂಬಂಧವಾದ ಮಾಹಿತಿಗಳನ್ನು ವಿದ್ಯಾರ್ಥಿಗಳ ತಲೆಯೊಳಗೆ ತುಂಬುವುದೇ ವಿದ್ಯೆಯ ಗುರಿಯಲ್ಲ. ಬದಲಾಗಿ ವಿದ್ಯಾರ್ಥಿಗಳ ಹೃದಯ ಪರಿವರ್ತನೆಯೇ ಶಿಕ್ಷಣದ ಮಾರ್ಗಸೂಚಿ ತತ್ತ್ವವಾಗಬೇಕು ಎಂದರ್ಥ. ಕೇವಲ ಗ್ರಂಥ ಪರಿಚಯ ಮತ್ತು ಕರಿಹಲಗೆಯ ಬರಹಗಳಷ್ಟೆ ಶಿಕ್ಷಣವೆಂಬ ಭ್ರಮೆ ಅಧ್ಯಾಪಕರಿಂದ ದೂರವಾಗಬೇಕು. ಒಂದು ಸಲ ಕೊಲ್ಕತ್ತ ವಿಶ್ವವಿದ್ಯಾನಿಲಯದಲ್ಲಿ ವಿದ್ಯಾರ್ಥಿ ವೃಂದವನ್ನುದ್ದೇಶಿಸಿ ಭಾಷಣ ಮಾಡುತ್ತಾ ಶ್ರೀ ಅರವಿಂದರು, 'ಇಂದು ಲೋಕದಲ್ಲಿ ಅನೇಕ ಮಂದಿ ವಿದ್ಯಾವಂತರು, ಪಂಡಿತರು ಹಾಗೂ ಮಹಾವಿಜ್ಞಾನಿಗಳು ಎನ್ನುವವರು ಇದ್ದಾರೆ. ಆದರೆ ಅವರು ಯಾವ ಸಮಾಜದಲ್ಲಿ

ಹುಟ್ಟಿ ಬೆಳೆದು ವಿದ್ಯಾಭ್ಯಾಸವನ್ನು ಪಡೆಯುತ್ತಾರೋ, ಆ ಸಮಾಜಕ್ಕೆ ಋಣಿಯಾಗಬೇಕು. ಸಮಾಜಕ್ಕೆ ಉಪಯೋಗವಾಗದ ವಿದ್ಯೆಯನ್ನು ಕಲಿಯುವುದಕ್ಕಿಂತ ಆ ಪುಸ್ತಕವನ್ನು ಸುಡುವುದೇ ಲೇಸು' ಎಂದಿದ್ದಾರೆ.

ಆದ್ದರಿಂದ ವಿಜ್ಞಾನ ಸಮಾಜಕ್ಕೆ ಅಪಹಾಸ್ಯ ಮಾಡುವುದಕ್ಕಲ್ಲ, ಬದಲಾಗಿ ವಿಜ್ಞಾನದ ಫಲ ಮನುಷ್ಯರನ್ನು ಪ್ರಗತಿಪರರನ್ನಾಗಿಸಿ ಆನಂದ ಪಡೆಯುವಲ್ಲಿ ಉಪಯೋಗವಾಬೇಕು. ಆದರೆ ಇಂದು ಒಂದು ಪಿಹೆಚ್.ಡಿ ಪಡೆದರೆ ಬಹಳ ಅಹಂಕಾರ ಪಡುತ್ತಾರೆ. ನಿಜವಾದ ಶಿಕ್ಷಕ ನಿಗರ್ವಿಯಾಗಿರಬೇಕು. ವಿನಯ, ವಿಶ್ವಾಸ ಹಾಗೂ ವಿವೇಕಗಳಿಂದ ಕೂಡಿರಬೇಕು. ವಿನಯ, ವಿವೇಕ ಮತ್ತು ನೀತಿಯಿಲ್ಲದ ವಿದ್ಯೆ ನಿಷ್ಪ್ರಯೋಜಕವಷ್ಟೇ ಅಲ್ಲ, ಅಪಾಯಕಾರಿ ಕೂಡ. ವಿಚಕ್ಷಣೆ ಇಲ್ಲದ ವಿದ್ಯಾವಂತ ಅನರ್ಥಗಳಿಗೆ ಕಾರಣನಾಗುವನು. ಜೀವನಪೂರ್ತಿ ಸ್ವಯಂಕಲಿಕೆ ಮಾಡುವ ಹಾಗೂ ಸಮಸ್ಯೆ ಬಂದಾಗ ಅದನ್ನು ಸ್ವತಂತ್ರವಾಗಿ ಪರಿಹರಿಸಿಕೊಳ್ಳುವ ಸಾಮರ್ಥ್ಯವನ್ನು ವಿದ್ಯಾರ್ಥಿಗಳಲ್ಲಿ ಶಿಕ್ಷಕರು ಸೃಷ್ಟಿಸಬೇಕು.

ಅಧ್ಯಾಪಕರು ಅನೇಕ ಪದವಿಗಳನ್ನು ಸಂಪಾದಿಸಿರಬಹುದು, ಸ್ಥಾನಮಾನಗಳನ್ನು ಹೊಂದಿರಬಹುದು, ಅನೇಕ ಉಪಯುಕ್ತ ಕೆಲಸಗಳನ್ನು ಮಾಡುತ್ತಿರಬಹುದು. ವಿದ್ಯೆಯ ಸಂಪಾದನೆಗೆ ಅನೇಕ ವರ್ಷಗಳನ್ನು ಕಳೆದಿರಬಹುದು, ತುಂಬಾ ತಿಳುವಳಿಕೆ ಪಡೆದಿರಬಹುದು ಮತ್ತು ಅವರಿಗೆ ಅನೇಕ ಗಣ್ಯವ್ಯಕ್ತಿಗಳ ಸಂಪರ್ಕವಿರಬಹುದು. ಆದರೆ ತನ್ನ ಕೆಟ್ಟ ಗುಣಗಳನ್ನು ಬಿಡದೆ ಹೋದರೆ, ವಿಶ್ವಾಸ ಮತ್ತು ಪ್ರೇಮತತ್ವ ಇಲ್ಲದೇ ಇದ್ದರೆ ಈ ವಿದ್ಯಾರ್ಜನೆಯಿಂದ ಪ್ರಯೋಜನವಿಲ್ಲ. ತುಂಬಾ ಸಮಯವನ್ನು ವಿನಿಯೋಗಿಸಿ ಅನೇಕ ವಿಚಾರಗಳನ್ನು ಅಭ್ಯಸಿಸಿ, ಕೇವಲವಾದ ಮತ್ತು ತರ್ಕ ಮಾಡುವುದರಿಂದ ಏನು ಪ್ರಯೋಜನ? ಗ್ರಂಥ ಪರಿಚಯವೇ ಶಿಕ್ಷಣವಾಗಬಾರದು. ವಿದ್ಯಾರ್ಜನೆಯು ಜೀವನೋಪಾಯಕ್ಕಾಗಿ ಮಾತ್ರವಲ್ಲ. ಜೀವನದಲ್ಲಿ ಕಾಸು ಸಂಪಾದನೆ ಮಾಡುವುದೇ ಈ ವಿದ್ಯೆಯ ಪರಮ ಉದ್ದೇಶವಾಗಬಾರದು. ಗ್ರಂಥಪರಿಚಯದ ಜೊತೆಗೆ ಉದಾತ್ತ ಅಭ್ಯಾಸಗಳನ್ನು, ಉತ್ತಮ ನಡವಳಿಕೆಗಳನ್ನು ಶ್ರೇಷ್ಠವಾದ ಆಲೋಚನೆಗಳನ್ನು ಹಾಗೂ ಮಾನವೀಯ ಮೌಲ್ಯಗಳನ್ನು ಕ್ರೋಢೀಕರಿಸಿ ಅವುಗಳನ್ನು ಹೃದಯದಲ್ಲಿಟ್ಟುಕೊಂಡು ಕಾರ್ಯರೂಪದಲ್ಲಿ ಹೊರತೆಗೆಯಬೇಕು. ಈ ತಳಹದಿಯನ್ನು ಭದ್ರವಾಗಿ ಹಾಕಿದರೆ ಬಹುಶಃ ಉಳಿದ ಭೌತಿಕ ವಿಷಯಗಳನ್ನೆಲ್ಲ – ಅಂದರೆ ಗಣಿತ, ಚರಿತ್ರೆ, ಭೂಗೋಳ ಇತ್ಯಾದಿ ವಿಷಯಗಳನ್ನೆಲ್ಲಾ ತಾವಾಗಿಯೇ ಅಥವಾ ಸ್ನೇಹಿತರ ಸಹಾಯದಿಂದ ಕಲಿಯಬಲ್ಲರು. ನಿಜವಾದ ಶಿಕ್ಷಕ ಸಮಾನತೆ, ಸಮತ್ವ ದೃಷ್ಟಿಯನ್ನು ಹೊಂದಿರಬೇಕು. ಅಮೂಲ್ಯ ಜ್ಞಾನನಿಧಿಗಳಂತಿರಬೇಕಾದ ಅಧ್ಯಾಪಕರು ಕೇವಲ ಸಂಬಳಕ್ಕಾಗಿ ದುಡಿಯುವವರಂತಾಗಬಾರದು. ಅಧ್ಯಾಪಕರು ಇತರ ಸಾಮಾನ್ಯ ಜೀವಿಗಳಂತೆ ನಾಗರಿಕತೆಯಿಂದ ಕೇವಲ ಲೌಕಿಕ ಭೋಗಗಳಿಗೆ ಜೊಲ್ಲು ಸುರಿಸಿ ಮಾನರಹಿತ, ಹೀನಕರವಾದ ಪ್ರವೃತ್ತಿಗಳನ್ನು ವೃದ್ಧಿಸಿಕೊಂಡರೆ, ಮುಂದಿನ ಪೀಳಿಗೆಯ ಗತಿ ಏನಾಗಬಹುದು? ವಿಜ್ಞಾನ ಹಾಗೂ ಆಧ್ಯಾತ್ಮಿಕತೆ ಪರಸ್ಪರ ವಿರುದ್ಧವಾದುದಲ್ಲ. ಭೌತಶಾಸ್ತ್ರ ಎಲ್ಲಿ ಕೊನೆಗೊಳ್ಳುತ್ತದೆಯೋ, ಅಲ್ಲಿ ಆಧ್ಯಾತ್ಮಿಕತೆ ಪ್ರಾರಂಭವಾಗುತ್ತದೆ. ಭೌತಶಾಸ್ತ್ರ ಅಥವಾ ರಸಾಯನಶಾಸ್ತ್ರಗಳನ್ನು ಕಲಿಯುವುದರಲ್ಲಿ ಅನುಕೂಲವಿದೆ. ಆದರೆ ಇದು ಹೊರಗಿನ ಹಾಗೂ ಲೌಕಿಕ ಶಿಕ್ಷಣ. ಇದು ಬರೀ ಪುಸ್ತಕದ ಜ್ಞಾನವನ್ನು ಕೊಡುತ್ತದೆ. ಅಧ್ಯಾಪಕರು ವಿದ್ಯಾರ್ಥಿಗಳಲ್ಲಿ ಭೌತಿಕಜ್ಞಾನದ ಜೊತೆಗೆ ಆಧ್ಯಾತ್ಮಿಕ ಜ್ಞಾನ, ಧೈರ್ಯ ಹಾಗೂ ಧೃಢನಿಶ್ಚಯ ಮೂಡಿ ಬರುವಂತೆ ಅವರನ್ನು ರೂಪಿಸಬೇಕು.

ಆಧುನಿಕ ಜಗತ್ತಿನಲ್ಲಿ ಈ ವಿಧದ ಅನೇಕ ಮಂದಿ ನಿಷ್ಣಾತರನ್ನು ಹಾಗೂ ಅಧಿಕ ಅರ್ಹತೆ ಪಡೆದವರನ್ನು ನಾವು ಕಾಣುತ್ತೇವೆ. ಪುಸ್ತಕದಿಂದ ಕಲಿತ ವಿದ್ಯೆಯ ಲಾಭ ಜೀವನಕ್ಕೆ ಕೇವಲ ನಾಲ್ಕನೆಯ ಒಂದು ಭಾಗ. ಬರೀ ಲೌಕಿಕ ವಿದ್ಯೆ ಅಸಹಾಯಕ ಮತ್ತು ಅಪಾಯಕಾರಿ. ಇನ್ನುಳಿದ ನಾಲ್ಕನೆಯ ಮೂರು ಭಾಗವು ಎಜುಕೇರ್‌ಗೆ ಸಂಬಂಧಿಸಿದುದು. ಎಜುಕೇರ್ ಎಂದರೆ ಒಳಗಿರುವುದನ್ನು ಹೊರಗೆ ತರುವುದು ಎಂದರ್ಥ. ಅಂದರೆ ಮಾನವೀಯ ಮೌಲ್ಯಗಳು ಪ್ರತಿಯೊಬ್ಬ ಮಾನವನಲ್ಲಿ ಅಂತರ್ಗತವಾಗಿದೆ. ಅವುಗಳನ್ನು ಹೊರಗಿನಿಂದ ಪಡೆಯಲು ಸಾಧ್ಯವಿಲ್ಲ. ಹೊರಕ್ಕೆ ತರುವುದು ಎಂದರೆ ಮೌಲ್ಯಗಳನ್ನು ಕಾರ್ಯಗತಗೊಳಿಸುವುದು, ಅಂದರೆ ಅವುಗಳನ್ನು ಹೃದಯದ ಅನುಭವ ಮಾಡಿಕೊಳ್ಳುವುದು. ಇದನ್ನೇ 'ನಾನು ಯಾರು?' ಎಂಬ ವಿಚಾರದಲ್ಲಿ ತೊಡಗುವುದು ಅಥವಾ 'ಕಾನ್‌ಸ್ಟೆಂಟ್ ಇಂಟಿಗ್ರೇಟೆಡ್ ಅವೇರ್‌ನೆಸ್' ಎಂದೂ ಕರೆಯಲಾಗಿದೆ. 'ನಾನು ಯಾರು?' ಎಂಬ ವಿಚಾರವೇ ವೇದಾಂತ ಬೋಧನೆಗಳ ಆದಿ ಮತ್ತು ಅಂತ್ಯ. ಎಜುಕೇರ್ ಅನ್ನೇ ಅಧ್ಯಾತ್ಮ ಅಥವಾ ಪಾರಮಾರ್ಥಿಕ ವಿದ್ಯೆ ಎಂದೂ ಹೇಳಲಾಗಿದೆ. ಆಧ್ಯಾತ್ಮಿಕ ವಿದ್ಯೆಯು ಪರಿಪೂರ್ಣವಾದುದು. ಇದು ಪುಸ್ತಕದಿಂದಾಗಲೀ, ಪ್ರಯೋಗಗಳಿಂದಾಗಲೀ ಅಥವಾ ಅಧಿಕ ಪರಿಶ್ರಮದಿಂದಲೇ ಆಗಲೀ ದೊರೆಯುವುದಲ್ಲ. ಇದು ಅಂತರಂಗದ ಅನುಭವದಿಂದ ಲಭಿಸುತ್ತದೆ. ಈ ಎರಡು ವಿಧವಾದ ವಿದ್ಯೆಗಳನ್ನು ಅಭ್ಯಾಸ ಮಾಡಿ, ಬೋಧಿಸಿ ತನ್ನ ಮತ್ತು ವಿದ್ಯಾರ್ಥಿಗಳ ಹೃದಯ ಪರಿವರ್ತನೆ ಮಾಡಿಕೊಳ್ಳುವುದೇ ಪರಿಪೂರ್ಣ ವಿದ್ಯೆ. ✷

**ಧ್ಯಾನವಿಲ್ಲದೆ ಮನಸ್ಸು ಸ್ಥಿರವಾಗಲಾರದು. ಸ್ಥಿರವಾದ ಮನಸ್ಸಿಲ್ಲದೆ ಆಧ್ಯಾತ್ಮಿಕ ಜೀವನ ಅಸಾಧ್ಯ. 'ಮನಸ್ಸು ಶಾಂತವಾದ ಮೇಲೆ ಧ್ಯಾನ ಮಾಡುತ್ತೇನೆ' ಎಂದು ಆಲೋಚಿಸುವುದು ಒಂದು ಭ್ರಾಂತಿ. ಧ್ಯಾನ, ಶಾಂತತೆಗಳೆರಡೂ ಒಂದನ್ನೊಂದು ಅನುಸರಿಸಿಕೊಂಡು ಹೋಗಬೇಕು.**

*– ಸ್ವಾಮಿ ಬ್ರಹ್ಮಾನಂದ*

# ಯೋಗವಾಸಿಷ್ಠದ ಕಥೆಗಳು

ಸ್ವಾಮಿ ವೀರೇಶಾನಂದ



ಕಥಾಗುಚ್ಛ - ೮

## ಭೀಮ, ಭಾಸ ಮತ್ತು ದೃಢರ ಕಥೆ

ವಸಿಷ್ಠರು ಶ್ರೀರಾಮಚಂದ್ರನಿಗೆ ತಮ್ಮ ಉಪದೇಶವನ್ನು ಮುಂದುವರೆಸುತ್ತಿದ್ದಾರೆ: ''ಮಗೂ, ರಾಮ. ಈ ಜಗತ್ತಿನಲ್ಲಿ ಸಾಧುಸಂತರ ಸಂಗಕ್ಕಿಂತ ಅಮೂಲ್ಯವಾದದ್ದು ಬೇರೆ ಯಾವುದೂ ಇಲ್ಲ. ಸಂಸಾರಸಾಗರವನ್ನು ದಾಟಿ, ಮೋಕ್ಷವನ್ನು ಪಡೆಯಲು ಇದಕ್ಕಿಂತ ಉತ್ತಮವಾದ ಉಪಾಯ ಬೇರೊಂದಿಲ್ಲ. ನಮ್ಮೆಲ್ಲ ತೀರ್ಥಯಾತ್ರೆ, ತಪಸ್ಸು ಮತ್ತು ಶಾಸ್ತ್ರಾಧ್ಯಯನಗಳು ಸತ್ಸಂಗ ವಿಲ್ಲದಿದ್ದರೆ ಫಲಿಸುವುದಿಲ್ಲ. ನಿಜವಾದ ಸಾಧುಗಳ ಸಂಗ ದುರ್ಲಭವಾದದ್ದು. ನಿಜವಾದ ಸಾಧು ಹೇಗಿರುತ್ತಾನೆ, ಗೊತ್ತೆ? ಅವನಲ್ಲಿ ಅಹಂಕಾರವು ಸಂಪೂರ್ಣವಾಗಿ ಅಡಗಿಹೋಗಿರುತ್ತದೆ; ಆತ್ಮಜ್ಞಾನದ ಕಾಂತಿ ಅವನ ಸುತ್ತಲೂ ಪಸರಿಸುತ್ತ ಇರುತ್ತದೆ; ಅವನು ಯಾವಾಗಲೂ ಋಜುಮಾರ್ಗದಲ್ಲಿಯೇ ನಡೆಯುತ್ತಾನೆ; ಯಾವತ್ತೂ ಶಾಸ್ತ್ರಗಳ ಆದೇಶದ ರೀತಿಯಲ್ಲಿಯೇ ತನ್ನ ಬಾಳುವೆಯನ್ನು ನಡೆಸುತ್ತಾನೆ.

''ಜ್ಞಾನವೆಂಬ ಸೂರ್ಯನನ್ನು ಆವರಿಸಿಕೊಂಡಿರುವುದು ಯಾವುದು ಗೊತ್ತೆ? ಅಹಂಕಾರವೆಂಬ ಮೋಡ. ಮೋಡ ಸರಿದಾಗ ಸೂರ್ಯ ಬೆಳಗುತ್ತಾನೆ. ಆಗ ನೈದಿಲೆ ಅರಳುತ್ತದೆ. ಹೀಗೆಯೇ, ಅಹಂಕಾರದ ಮೋಡ ಸರಿದಾಗ, ಜ್ಞಾನಸೂರ್ಯನ ಪ್ರಭೆಯಿಂದ ಬ್ರಹ್ಮಜ್ಞಾನವೆಂಬ ನೈದಿಲೆಯು ಅರಳುವುದು. ಅಹಂಕಾರವನ್ನು ಒಂದು ದೊಡ್ಡ ವೃಕ್ಷಕ್ಕೂ ಹೋಲಿಸಬಹುದು. ಅಹಂಕಾರವೆಂಬ ವೃಕ್ಷಕ್ಕೆ 'ಜನ್ಮಗಳು' ಎಂಬ, ಎಲ್ಲೆಡೆ ಹರಡಿಕೊಂಡಿರುವ, ಲೆಕ್ಕವಿಲ್ಲದಷ್ಟು ಕಾಂಡಗಳು. ಈ ಕಾಂಡಗಳಿಗೆ 'ಅಹಂಕಾರ (ನಾನು ಎನ್ನುವ ಭಾವನೆ)' 'ಮಮಕಾರ (ನನ್ನದು ಎನ್ನುವ ಭಾವನೆ)' ಎಂಬ ಉದ್ದುದ್ದವಾದ ಶಾಖೆಗಳು. ಆ ಶಾಖೆಗಳು ದುಃಖ, ನೋವು, ತಾಪತ್ರಯಗಳ ಫಲಗಳನ್ನು ಬಿಡುತ್ತಿವೆ. ಎಲ್ಲಿಯವರೆಗೆ ಅಹಂಕಾರವಿರುವುದೋ, ಅಲ್ಲಿಯವರೆಗೆ ಆಸೆಗಳು ಬೆಳೆದುಕೊಂಡು ಹೋಗುತ್ತಲೇ ಇರುತ್ತವೆ. ಅವುಗಳಿಗೆ ಕೊನೆಯೇ ಇರುವುದಿಲ್ಲ. ಯಾರು ಅಹಂಕಾರದ ಮೊಳಕೆಗಳನ್ನು ತನ್ನ ಹೃದಯದಿಂದ ಕಿತ್ತೆಸೆಯಲು ಸಮರ್ಥನಾಗುತ್ತಾನೆಯೋ, ಅವನು ಮಾತ್ರ ಸಂಸಾರ ವೃಕ್ಷದಿಂದ ಪಾರಾಗಲು ಸಾಧ್ಯ.''

ಈಗ ರಾಮನು ವಸಿಷ್ಠರಿಗೆ ಒಂದು ಪ್ರಶ್ನೆ ಕೇಳುತ್ತಾನೆ: ''ಓ ಗುರುದೇವ, ಅಹಂಕಾರದ ಸ್ವರೂಪವೇನು? ಇದನ್ನು ಶಮನ ಮಾಡುವ ಬಗೆಯೇನು? ಇದರಿಂದಾಗುವ ಪ್ರಯೋಜನವೇನು? ಮಾನವನು ದೇಹದಲ್ಲಿನ ವಾಸನೆಗಳಿಗೆ ಹೇಗೆ ತಾನೇ ಕಟ್ಟುಬಿದ್ದಿದ್ದಾನೆ? ಅಹಂಕಾರವಿರುವುದು ಎಲ್ಲಿ - ದೇಹದಲ್ಲಿಯೋ, ಇಲ್ಲ ಮನಸ್ಸಿನಲ್ಲಿಯೋ? ದೇಹವನ್ನು ತ್ಯಜಿಸಿದರೆ ಅಹಂಕಾರವೂ ನಾಶವಾಗುವುದೇನು?''

ಇದಕ್ಕೆ ವಸಿಷ್ಠರು ಹೀಗೆ ಉತ್ತರಿಸುತ್ತಾರೆ: ''ಅಪ್ಪಾ, ರಾಮಚಂದ್ರ. ಯಾವ ವ್ಯಕ್ತಿಯು ಯಾವುದನ್ನೂ ಆಶಿಸುವುದಿಲ್ಲವೋ, ಯಾವುದನ್ನೂ ದ್ವೇಷಿಸುವುದಿಲ್ಲವೋ, ತನ್ನ ಮನಶ್ಶಾಂತಿಯನ್ನು ಎಲ್ಲಬಗೆಯ ಪರಿಸ್ಥಿತಿಯಲ್ಲಿಯೂ ಕಾಪಾಡಿಕೊಂಡಿರುತ್ತಾನೆಯೋ - ಅಂಥವನು ಅಹಂಕಾರದ ಭಾವನೆಯಿಂದ ಪ್ರಭಾವಿತನಾಗುವುದಿಲ್ಲ. ಈ ಜಗತ್ತಿನಲ್ಲಿ ಮೂರು ಬಗೆಯ ಅಹಂಕಾರಗಳಿವೆ: ಒಂದು ಅನುಕೂಲಕರವಾದದ್ದು; ಇನ್ನೊಂದು ಸೂಕ್ಷ್ಮರೂಪವಾಗಿದ್ದು ಅವಿದ್ಯೆಯ ಫಲವಾಗಿರುವುದು; ಮತ್ತೊಂದು ಸರ್ವಥಾ ತ್ಯಜಿಸಬೇಕಾದದ್ದು.

''ಮೊದಲನೆಯದು ಪರಮ ಅಥವಾ ಅಖಂಡ ಅಹಂಕಾರ. ಅದು ನಿತ್ಯವಾದುದು. ಇದು ಇಡೀ ಪ್ರಪಂಚವನ್ನು ವ್ಯಾಪಿಸಿದೆ. ಈ ತತ್ತ್ವವನ್ನು ಬಿಟ್ಟು ಈ ಸೃಷ್ಟಿಯಲ್ಲಿ ಏನೂ ಇಲ್ಲ. 'ಅಹಂ ಬ್ರಹ್ಮಾಸ್ಮಿ' ಎಂಬ ಅನುಭವದಲ್ಲಿ ಈ ಬಗೆಯ ಅಹಂಕಾರವು ವ್ಯಕ್ತವಾಗುತ್ತದೆ. ಇದನ್ನು ಸಾತ್ತ್ವಿಕ ಅಹಂಕಾರ ಎನ್ನಬಹುದು.

''ನಮ್ಮ 'ಅಹಂ' ಅತ್ಯಂತ ಸೂಕ್ಷ್ಮವಾಗಿ ಎಲ್ಲಿ ಕಂಡು ಬರುವುದೋ ಅದನ್ನು ರಾಜಸಿಕ ಅಹಂಕಾರ ಎಂದು ಕರೆಯಬಹುದು. ಮೇಲಿನ ಎರಡು ಅಹಂಕಾರಗಳನ್ನು ಜೀವನ್ಮುಕ್ತರಲ್ಲಿ ನೋಡುತ್ತೇವೆ. ಇವು ಬಂಧನವನ್ನು ಉಂಟುಮಾಡುವುದಿಲ್ಲ. ಅದಕ್ಕೆ ಬದಲಾಗಿ ಮುಕ್ತಿಯ ಪಥದೆಡೆಗೆ ಒಯ್ಯುತ್ತವೆ.

''ಮೂರನೆಯ ಬಗೆಯ ಅಹಂಕಾರವೊಂದಿದೆ. ಅದೆಂದರೆ, ನಮ್ಮನ್ನು 'ದೇಹ', 'ಮನಸ್ಸು' ಮತ್ತು 'ಬುದ್ಧಿ'ಗಳೊಡನೆ ತಾದಾತ್ಮ್ಯಗೊಳಿಸಿಕೊಂಡು, 'ನಾನೇ ದೇಹ', 'ನಾನೇ ಮನಸ್ಸು' ಮತ್ತು 'ನಾನೇ ಬುದ್ಧಿ' ಎಂದು ತಪ್ಪಾಗಿ ಭಾವಿಸಿಕೊಳ್ಳುವುದು. ಇದು ಅತ್ಯಂತ ಕೀಳುಮಟ್ಟದ ಅಹಂಕಾರ. ಇಂಥ ಅಹಂಕಾರವನ್ನೇ ಪ್ರಾಪಂಚಿಕ ವ್ಯಕ್ತಿಗಳಲ್ಲಿ ನಾವು ಕಾಣುವುದು. ಈ ಅಹಂಕಾರವೇ ಸಂಸಾರ ವೃಕ್ಷದ ಮೂಲ. ಈ ಬಗೆಯ ಅಹಂಕಾರವನ್ನು ಹೊಂದಿರುವವರಿಗೆ ವಿವೇಕಪ್ರಜ್ಞೆ ಇರುವುದಿಲ್ಲ. ಇದರಿಂದ ಲೆಕ್ಕವಿಲ್ಲದಷ್ಟು ಜನರು ಮೋಹಿತರಾಗಿದ್ದಾರೆ; ತಮ್ಮ ಬುದ್ಧಿಶಕ್ತಿ

ಯನ್ನು ಹಾಳು ಮಾಡಿಕೊಂಡಿದ್ದಾರೆ. ಇದರಿಂದ ಉಪದ್ರವಗಳ ಪರಂಪರೆಯನ್ನೇ ನಾವು ಹೊತ್ತುಕೊಳ್ಳಬೇಕಾಗುತ್ತದೆ. ಈ ಅನರ್ಥಕರ ಅಹಂಕಾರವನ್ನು ಮೇಲೆ ಹೇಳಿದ ಉತ್ತಮ ಅಹಂ ಕಾರಗಳಿಂದ ನಾಶಪಡಿಸಿಕೊಳ್ಳಬೇಕು. ಈ ಕೀಳು ಅಹಂಕಾರವನ್ನು ಕಡಿಮೆ ಮಾಡಿಕೊಂಡಷ್ಟೂ ಪರಿಶುದ್ಧ ಆತ್ಮನ ಬೆಳಕು ಹೆಚ್ಚು ಹೆಚ್ಚು ಸ್ಪಷ್ಟವಾಗುತ್ತ ಹೋಗುತ್ತದೆ.

''ರಾಮಚಂದ್ರ, ಮೊದಲ ಎರಡು ಉತ್ತಮ ಅಹಂಕಾರ ಗಳನ್ನು ಬೆಳೆಸಿಕೊಂಡರೆ, ಮೂರನೆಯ ಕೀಳು ಅಹಂಕಾರವನ್ನು ಸುಲಭವಾಗಿ ದಮನ ಮಾಡಬಹುದು. ಅನಂತರ ಆ ಉತ್ತಮ ಅಹಂಕಾರಗಳನ್ನೂ ನಾಶಪಡಿಸಿಕೊಳ್ಳಬೇಕಾಗುತ್ತದೆ. ಆಗ ಮಾತ್ರ ಅವಿನಾಶಿಯಾದ ಪರಬ್ರಹ್ಮನಲ್ಲಿ ಐಕ್ಯತೆಯನ್ನು ಹೊಂದುವೆ. ಓ ರಾಮ, 'ನಾನು' ಎಂಬುದನ್ನು ದೇಹದೊಡನೆಯಾಗಲಿ, ಮನಸ್ಸಿ ನೊಡನೆಯಾಗಲಿ ತಾದಾತ್ಮ್ಯಗೊಳಿಸಿಕೊಳ್ಳದಿರು. ಪರಮಾತ್ಮ ಅಥವಾ ಪರಬ್ರಹ್ಮನಲ್ಲಿ ನಿನ್ನ 'ಅಹಂ' ಅನ್ನು ಒಂದಾಗಿಸಿಕೋ.

''ಓ ರಾಮ, ಸತ್ಯ ಮತ್ತು ಪ್ರೇಮದಲ್ಲಿ ನೆಲೆಗೊಂಡು ಮುಕ್ತ ಜೀವನವನ್ನು ನಡೆಸು. ಆ ಸ್ಥಿತಿಯಲ್ಲಿ ಅಹಂಕಾರದ ಲವಲೇಶವೂ ಇರದು. ಅಹಂಕಾರವು ಮಾನವನ ಚಾರಿತ್ರ್ಯದ ಮೇಲೆ ಹೇಗೆ ಪರಿಣಾಮ ಬೀರುತ್ತದೆ ಎನ್ನುವುದನ್ನು ಬಣ್ಣಿಸುವ ಕಥೆಯೊಂದನ್ನು ನಾನು ನಿನಗೆ ಹೇಳುತ್ತೇನೆ. ಕೇಳು.''

ವಸಿಷ್ಠರು ಕತೆಯನ್ನು ಹೇಳಲು ಆರಂಭಿಸಿದರು:

''ಅಧೋಲೋಕದಲ್ಲಿ ಶಂಬರನೆಂಬ ಒಬ್ಬ ಭಯಂಕರ ರಾಕ್ಷಸನಿದ್ದನು. ಅವನು ಮಂತ್ರಜಾಲದಲ್ಲಿ ಪ್ರವೀಣನಾಗಿದ್ದನು. ಸ್ವರ್ಗದಲ್ಲಿನ ರಾಕ್ಷಸರೂ ಅವನಿಗೆ ಭಯಪಡುತ್ತಿದ್ದರು. ಒಮ್ಮೆ ಅವನು ದೇವತೆಗಳನ್ನು ಸೋಲಿಸಲು ಅಜೇಯ ಸೈನ್ಯವೊಂದನ್ನು ಕಳಿಸಿದನು. ತನ್ನ ಸೈನ್ಯವನ್ನು ರಕ್ಷಿಸಲು ಅವನು ಮೂರು ದೈತ್ಯ ರನ್ನು ತಾನೇ ಸ್ವತಃ ಸೃಷ್ಟಿಸಿದನು. ಅವರ ಹೆಸರುಗಳು ದಾಮ, ವ್ಯಾಲ ಮತ್ತು ಕಟ ಎಂದು. ಈ ರಾಕ್ಷಸರಿಗೆ ಹಿಂದಿನ ಜನ್ಮಗಳು ಯಾವುವೂ ಇರಲಿಲ್ಲ. ಹೀಗಾಗಿ ಕರ್ಮಸಂಕರವೇ ಅವರಿಗೆ ಇರಲಿಲ್ಲ. ಇದರಿಂದ ಯಾವ ಸಂಸ್ಕಾರ ವಾಸನೆಯೂ ಅವರ ಮನಸ್ಸಿನಲ್ಲಿ ಇರಲೇ ಇಲ್ಲ. ಈ ಕಾರಣದಿಂದ ಅವರಲ್ಲಿ ಅಹಂ ಕಾರದ ಲವಲೇಶವೂ ಇರಲಿಲ್ಲ. ಆದರೂ ಅವರು ಸಿದ್ಧಪುರುಷ ರೇನೂ ಆಗಿರಲಿಲ್ಲ. ಅಂಥ ವಿಚಿತ್ರ ಸ್ಥಿತಿ ಅವರದು.

''ಈ ಮೂವರು ರಾಕ್ಷಸರೂ ಘೋರವಾಗಿ ಹೋರಾಡಿದರು. ಮಗುವು ಬೆಂಕಿಯ ಜೊತೆಗೆ ಭಯವಿಲ್ಲದೆ ಆಡುವಂತೆ, ಸಾವಿನ ಭಯ ಸ್ವಲ್ಪವೂ ಇಲ್ಲದೆ ದೇವತೆಗಳೊಡನೆ ಅವರೆಲ್ಲ ಸೆಣಸಾಡಿ ದರು. ದೇವತೆಗಳಿಗೆ ಇನ್ನಿಲ್ಲದ ತಾಪತ್ರಯವನ್ನುಂಟುಮಾಡಿ ದರು. ಹೋರಾಡುತ್ತ, ಹೋರಾಡುತ್ತ ಅವರಲ್ಲಿ 'ಅಹಂಕಾರ'ವು ಅದು ಹೇಗೋ, ಅವರಿಗೇ ಗೊತ್ತಿಲ್ಲದಂತೆ ನುಸುಳಿಬಿಟ್ಟಿತು. ಒಮ್ಮೆ ಅಹಂಕಾರದ ಲೇಶಮಾತ್ರ ಅವರಲ್ಲಿ ಹೊಕ್ಕಿತೋ ಇಲ್ಲವೋ, ತಮ್ಮ ಜೀವಗಳನ್ನು ಕಾಪಾಡಿಕೊಳ್ಳುವ ಕಾಮನೆಯೂ ಬಂದು ಬಿಟ್ಟಿತು. ಸಂಪತ್ತು, ಆರೋಗ್ಯ, ಭೋಗಗಳನ್ನು ಗಳಿಸಿ ಬಹುಕಾಲ ಬಾಳನ್ನು ಮುಂದೂಡುವ ಆಸೆ ಕೆರಳಿಬಿಟ್ಟಿತು. ಈ ಆಸೆಗಳು, ಕಾಮನೆಗಳು ಹೋರಾಡುವ ಅವರ ಇಚ್ಛಾಶಕ್ತಿಯನ್ನು ಕುಂದಿಸಿ, ಅವರ ಮನಸ್ಸಿನಲ್ಲಿ ಇನ್ನಿಲ್ಲದ ಭ್ರಾಂತಿಯನ್ನು ಹುಟ್ಟಿಸಿತು. ಅವರ ಹೋರಾಟ ಕಳೆಗುಂದಿತು; ಸಾಯುವ ಭಯ ಹೆಚ್ಚಾಯಿತು. ದೇವತೆಗಳು ಈ ಪರಿಸ್ಥಿತಿಯ ಪ್ರಯೋಜನವನ್ನು ಪಡೆದು ಕೊಂಡರು, ಭಯಂಕರವಾದ ಆಕ್ರಮಣವನ್ನು ಮಾಡಿದರು. ಭಯದಿಂದ ತತ್ತರಿಸಿಹೋದ ಈ ಮೂವರು ದೈತ್ಯ ದಂಡ ನಾಯಕರು ರಣರಂಗದಿಂದ ಒಡನೆಯೇ ಪಲಾಯನಗೈದರು.

''ದೈತ್ಯದೊರೆ ಶಂಬರ ಹೀಗೆ ಆಲೋಚನೆ ಮಾಡಿ ನೋಡಿದ: 'ನನ್ನ ಮೂರು ಜನ ಸೇನಾಧಿಪತಿಗಳು ಸೋಲನ್ನಪ್ಪಿದುದು ಅವರ ಅಹಂಕಾರದಿಂದಲೇ ಅಲ್ಲವೆ? ಅಹಂಕಾರವೇ ಅಭಿಮಾನವನ್ನು ಉಂಟುಮಾಡುತ್ತದೆ. ಅಭಿಮಾನವು ಬುದ್ಧಿಯನ್ನು ಕೆಡಿಸುತ್ತದೆ. ಅವರೆಲ್ಲ ಆತ್ಮಜ್ಞಾನಶೂನ್ಯರಾಗಿದ್ದರು. ಅದಕ್ಕೆಂದೇ ಅಹಂಕಾರಕ್ಕೆ ವಶವಾಗಿ ಹೋದರು. 'ನಾನು' ಮತ್ತು 'ನನ್ನದು' ಎಂಬ ಭಾವನೆ ಅವರಲ್ಲಿ ಪ್ರಖರವಾಗಿತ್ತು. ನಾನೀಗ ನನ್ನ ಮಾಯಾಶಕ್ತಿಯ ಮೂಲಕ ಮತ್ತೆ ಮೂವರು ದಾನವರನ್ನು ಸೃಷ್ಟಿಸುತ್ತೇನೆ. ಅವರು ಆತ್ಮಜ್ಞಾನದಿಂದ ಕೂಡಿದವರಾಗಿರುತ್ತಾರೆ. ಶಾಸ್ತ್ರಪ್ರವೀಣರಾಗಿರು ತ್ತಾರೆ. ಅಹಂಕಾರದ ಭ್ರಮೆಯಿಂದ ಮುಕ್ತರಾಗಿರುತ್ತಾರೆ. ಅಂಥ ವರು ಮಾತ್ರವೇ ದೇವತೆಗಳನ್ನು ನಾಶಮಾಡಲು ಶಕ್ತರಾಗುತ್ತಾರೆ.'

''ಹೀಗೆ ಯೋಚಿಸಿದ ಶಂಬರನು ಮೂರು ರಾಕ್ಷಸರನ್ನು ಪುನಃ ಹುಟ್ಟಿಸಿದನು. ಸಮುದ್ರದ ಮೇಲೆ ತೇಲುವ ನೊರೆಯಂತೆ ಅವರು ಆಕಾಶವನ್ನೆಲ್ಲ ತುಂಬಿಕೊಂಡುಬಿಟ್ಟರು. ಅವರು ಸರ್ವ ಜ್ಞರೂ ಆತ್ಮಜ್ಞರೂ ಆಗಿದ್ದರು. ವೈರಾಗ್ಯವಂತರೂ ಪಾಪಲೇಶ ರಹಿತರೂ ಆಗಿದ್ದರು. ಪ್ರಶಾಂತ ಮನಸ್ಸಿನವರಾದ ಅವರು ಅನೇಕ ಸದ್ಗುಣಗಳಿಂದ ಕೂಡಿದ್ದರು. ರಾಗ, ದ್ವೇಷ, ಸಂಶಯ, ಭಯ, ಮೋಹ, ಆಸಕ್ತಿ, ಅಹಂಕಾರ ಮತ್ತು ಮಮಕಾರಗಳಿಂದ ಮುಕ್ತ ರಾಗಿದ್ದರು. ಇಡೀ ಜಗತ್ತಿಗೆ ಅವರು ಒಂದು ಹುಲ್ಲುಕಡ್ಡಿಯಷ್ಟೂ ಕೂಡ ಬೆಲೆಕೊಡುತ್ತಿರಲಿಲ್ಲ. ಇಡೀ ಪ್ರಪಂಚದ ಬಗ್ಗೆ ಅಷ್ಟೊಂದು ಔದಾಸೀನ್ಯ ಅವರಿಗೆ. ಭೀಮ, ಭಾಸ ಮತ್ತು ದೃಢ ಎಂಬುವೇ ಅವರ ಹೆಸರುಗಳು.

''ದೇವತೆಗಳೊಡನೆ ಯುದ್ಧಮಾಡಿರೆಂದು ದಾನವ ದೊರೆ ಶಂಬರನು ಈ ಮೂವರಿಗೂ ಆಜ್ಞೆ ಮಾಡಿದನು. ಅವರು ಮೂವರೂ ಲೆಕ್ಕವಿಲ್ಲದಷ್ಟು ವರ್ಷಗಳ ಕಾಲ ಯುದ್ಧಮಾಡುತ್ತಲೇ ಹೋದರು. ಗರ್ವದಿಂದ ಅವರು ಬೀಗುತ್ತಿರಲಿಲ್ಲ. ಹೋರಾಡುವು ದಕ್ಕೆ ಸ್ವಲ್ಪವೂ ಭಯಪಡುತ್ತಿರಲಿಲ್ಲ. 'ಈ ದರಿದ್ರ ದೇಹವು ನಶ್ವರ; 'ನಾನು, ನಾನು' ಎಂದು ಯಾವುದನ್ನು ಜನರು ಕರೆಯುತ್ತಾರೋ, ಅದು ಬರಿಯ ಭ್ರಮೆ' ಎಂಬ ದೃಢನಿಶ್ಚಯದಿಂದ ಕದನ ಮಾಡು ತ್ತಿದ್ದರವರು. ನಿತ್ಯ ವರ್ತಮಾನದ ಗಳಿಗೆಯಲ್ಲಿಯೇ ತಮ್ಮ ಮನಸ್ಸನ್ನಿಟ್ಟಿದ್ದ ಅವರಿಗೆ ಭೂತ ಮತ್ತು ಭವಿಷ್ಯತ್ಕಾಲಗಳ

ಪರಿವೆಯೇ ಇರಲಿಲ್ಲ. ಮೃತ್ಯುಭಯವಿಲ್ಲದ ಅವರ ಮನಸ್ಸುಗಳು ನಿರಾಸಕ್ತವಾಗಿದ್ದವು. 'ಕೊಲ್ಲುತ್ತಿದ್ದೇವೆ' ಎಂಬ ಭಾವನೆ ಸ್ವಲ್ಪವೂ ಇಲ್ಲದೆ ಶತ್ರುಗಳನ್ನು ಅವರು ಸದೆಬಡೆಯುತ್ತಿದ್ದರು. ಎಲ್ಲ ರೀತಿಯ ಆಸೆಗಳಿಂದ ಸ್ವತಂತ್ರರಾಗಿದ್ದರು ಅವರು. ಕರ್ತವ್ಯವನ್ನು ಮಾಡುತ್ತಿದ್ದರೂ, 'ನಾವು ಕರ್ತೃಗಳೇ ಅಲ್ಲ' ಎಂದು ಅವರು ಎಣಿಸಿದ್ದರು. ತಮ್ಮ ಧಣಿ ಶಂಬರನಿಗೆ ತಾವು ಸಲ್ಲಿಸಬೇಕಾದ ಸೇವೆಯ ರೂಪದಲ್ಲಿ ಅವರು ಯುದ್ಧ ಮಾಡುತ್ತಿದ್ದರು. ಬೇರೆ ಯಾವ ಬಗೆಯ ಆವೇಗವಾಗಲಿ, ಅತಿಪ್ರೀತಿಯಾಗಲಿ ಅವರ ಮನಸ್ಸನ್ನು ತಟ್ಟಲೇ ಇಲ್ಲ.

''ಓ ರಾಮಚಂದ್ರ, ಹೀಗೆ ಅಹಂಕಾರದಿಂದ ಯಾರು ಮುಕ್ತರಾಗಿರುವರೋ, ಆತ್ಮವಿಚಾರವನ್ನು ಅನವರತ ಮಾಡುತ್ತಲೇ ಇರುತ್ತಾರೋ, ಅವರು ಮಾತ್ರವೇ ಜನ್ಮಮೃತ್ಯುಗಳ ಭಯದಿಂದ ಸಂಪೂರ್ಣವಾಗಿ ಮುಕ್ತಿಹೊಂದುತ್ತಾರೆ.

''ದೇವತೆಗಳೆಲ್ಲ ರಣರಂಗದಿಂದ ಓಡಿಹೋದರು. ಭಗವಾನ್ ವಿಷ್ಣುವನ್ನು ಶರಣುಹೊಂದಿದರು. ಪರಮಾತ್ಮನು ಯುದ್ಧಭೂಮಿಗೆ ತಾನೇ ಸ್ವತಃ ಬಂದನು. ಆ ಮೂರು ಅಸುರರೊಡನೆ ಸೆಣಸಿ, ಅವರನ್ನು ಕೊಂದನು. ಭಗವಂತನೇ ಅವರು ಮೂವರನ್ನು ತನ್ನ ಪರಂಧಾಮವಾದ ವೈಕುಂಠಕ್ಕೆ ಕಳಿಸಿಬಿಟ್ಟನು!

''ಓ ರಾಮ, ಸೂಕ್ಷ್ಮ ಬಯಕೆಗಳಾದ ವಾಸನೆಗಳು ಬಂಧನವನ್ನುಂಟುಮಾಡುತ್ತವೆ. ವಾಸನೆಗಳನ್ನು ಮರ್ದಿಸಿದರೆ ಮಾತ್ರವೇ ಭವಬಂಧನ ಕಳೆಯುತ್ತದೆ. ಆತ್ಮಜ್ಞಾನದಿಂದ ಎಲ್ಲ ವಾಸನೆಗಳೂ ಸುಟ್ಟುಹೋಗುತ್ತವೆ. ಆಗ ಮಾತ್ರ ಮನಸ್ಸು ಪ್ರಶಾಂತವಾಗುತ್ತದೆ. ಜನರು ವಿವಿಧ ಬಾಹ್ಯ ವಸ್ತುಗಳನ್ನು ಚಿಂತಿಸುತ್ತಾರೆ. ಅದೇ ಮನಸ್ಸಿನ ಅಸ್ತಿತ್ವಕ್ಕೆ ಕಾರಣ. ಆಲೋಚನೆಗಳೆಲ್ಲ ಅಡಗಿಹೋದರೆ, ಮನಸ್ಸೇ ಇಲ್ಲವಾಗುತ್ತದೆ. ಮನಸ್ಸು ಈ ಜಗತ್ತಿನ ಕಡೆಗೆ ಆಕರ್ಷಿತವಾಗುವುದಕ್ಕೆ ಕಾರಣ ಜನ್ಮಜನ್ಮಾಂತರಗಳ ವಾಸನೆಗಳು. ಈ ವಾಸನೆಗಳಿಂದ ಮುಕ್ತವಾದ ಸ್ಥಿತಿಯನ್ನೇ ನಾವು ಮೋಕ್ಷ ಎಂದು ಕರೆಯುವುದು.

''ಮೊದಲು ದಾಮ, ವ್ಯಾಲ ಮತ್ತು ಕಟ ಈ ಮೂವರು ಅಸುರರು ಪರಾಭವಗೊಂಡದ್ದು ತಮ್ಮ ಅಹಂಕಾರದಿಂದಲೇ. ನಂತರ ಬಂದ ಭೀಮ, ಭಾಸ ಮತ್ತು ದೃಢ ಎಂಬ ಈ ದೈತ್ಯರು ವಿಜೇತ ರಾದದ್ದು ಅಹಂಕಾರದ ಅಭಾವದಿಂದ.

''ಓ ರಾಮಚಂದ್ರ, ಯಾರು ಅಹಂಕಾರವನ್ನು ಕಳೆದುಕೊಳ್ಳುವರೋ, ಅವರಿಗೆ ಮಾತ್ರ ಜೀವನದಲ್ಲಿ ವಿಜಯ. ಇದೇ ಈ ಕಥೆಯ ತಿರುಳು. ಇದನ್ನು ಚೆನ್ನಾಗಿ ಅರಿತುಕೋ. ದಾಮ, ವ್ಯಾಲ, ಕಟರ ಮಾರ್ಗವನ್ನು ತಳೆಯದಿರು. ಭೀಮ, ಭಾಸ ಮತ್ತು ದೃಢರಂತೆ ನಿರಹಂಕಾರಿಯಾಗಿರು. ಆತ್ಮಜ್ಞಾನದ ಮೂಲಕ ವಸ್ತುಗಳ ಯಥಾರ್ಥ ಸ್ವಭಾವವನ್ನು ಅರಿತುಕೋ. ನಿತ್ಯಾನಂದ ವಿಭೂತಿಯಾದ ಆತ್ಮಸ್ವರೂಪದಲ್ಲಿ ನಿಶ್ಚಿಂತೆಯಿಂದ ವಿಶ್ರಮಿಸು.''



## ಉತ್ತಂಕ ಮೋಡ

ಮಹಾಭಾರತದ ಯುದ್ಧವಾದ ಮೇಲೆ ಶ್ರೀಕೃಷ್ಣ ದ್ವಾರಕೆಗೆ ಹೊರಟಿದ್ದ. ದಾರಿಯಲ್ಲಿ ಕೃಷ್ಣ ಉತ್ತಂಕ ಮಹರ್ಷಿಯನ್ನು ಕಂಡ. ಉತ್ತಂಕನಿಗೆ ಯುದ್ಧದ ವಿಷಯ ತಿಳಿದಿರಲಿಲ್ಲ. 'ಕೌರವ ಪಾಂಡವರಲ್ಲಿ ಸೋದರ ಸ್ನೇಹವುಂಟಾಗಿ ಅವರು ಎಲ್ಲರೂ ಸುಖವಾಗಿರುವರೆ?' ಎಂದು ಅವನು ಶ್ರೀಕೃಷ್ಣನನ್ನು ಪ್ರಶ್ನಿಸಿದನು. ಕೃಷ್ಣ, ಬುದ್ಧಿಯಿಂದಾಗಲೀ ಬಲದಿಂದಲಾಗಲೀ ವಿಧಿಯನ್ನು ಮೀರಲಾಗುವುದಿಲ್ಲ ಎಂದು ನಡೆದುದನ್ನು ವಿವರಿಸಿದನು.

ಇದರಿಂದ ಕೋಪಗೊಂಡ ಉತ್ತಂಕ, 'ಸಮರ್ಥನಾದ ನೀನು ಕೌರವರನ್ನು ಸಂರಕ್ಷಿಸದೆ ಹೋದುದಕ್ಕೆ ನಿನ್ನನ್ನು ಶಪಿಸುತ್ತೇನೆ' ಎಂದು ಕೃಷ್ಣನಿಗೆ ಶಾಪ ಕೊಡಲು ಹೊರಟ. ಕೃಷ್ಣ ಅವನನ್ನು ಸಮಾಧಾನ ಮಾಡಿ, ಯುಗಯುಗದಲ್ಲಿ ಧರ್ಮದ ಸೇತುವೆಯಾಗಿ ಇರುವವನು ನಾನು ಎಂದು ತನ್ನ ಮಹಿಮೆಯನ್ನೆಲ್ಲಾ ತಿಳಿಸಿ ಹೇಳಿದ. ಆಗ ಅವನ ಮಾತುಗಳಿಂದ ಭಗವತ್ಸ್ವರೂಪವನ್ನರಿತ ಆ ಮುನಿ, 'ನೀನು ಅರ್ಜುನನಿಗೆ ತೋರಿದ ವಿಶ್ವರೂಪವನ್ನು ನನಗೂ ತೋರು' ಎಂದು ಪ್ರಾರ್ಥಿಸಿದ. ಆಗ ಕೃಷ್ಣನ ಆ ವಿಶ್ವರೂಪವನ್ನು ನೋಡಿ ಸಂತೋಷದಿಂದ ಅವನನ್ನು ಹೃದಯಪೂರ್ವಕವಾಗಿ ಸ್ತುತಿಸಿದ. ಕೃಷ್ಣನು ಮುನಿಗೆ, ಬೇಕಾದ ವರ ಬೇಡು ಎಂದ. 'ನಿನ್ನ ವಿಶ್ವರೂಪದರ್ಶನಕ್ಕಿಂತ ಮತ್ತಾವ ವರ ಬೇಕು ನನಗೆ? ಯಾವ ವರವೂ ಬೇಡ' ಎಂದ ಮುನಿ. ಆದರೆ ಕೃಷ್ಣನ ಒತ್ತಾಯದ ಮೇರೆಗೆ, 'ನಾನಿರುವ ಮರಳುಗಾಡಿನಲ್ಲಿ ನಾನು ಬಯಸಿದಾಗ ನೀರು ಸಿಗುವಂತೆ ಮಾಡು' ಎಂದು ಬೇಡಿದ. ಕೃಷ್ಣ ಹಾಗೆಯೇ ಆಗಲೆಂದು ಮುಂದೆ ನಡೆದ. ಕೆಲವು ದಿನ ಕಳೆದ ಮೇಲೆ ಉತ್ತಂಕನಿಗೆ ಒಮ್ಮೆ ತುಂಬಾ ಬಾಯಾರಿಕೆಯಾಯಿತು. ಅವನು ಕೃಷ್ಣನನ್ನು ನೆನೆದ. ಆಗ ಒಬ್ಬ ಬೇಟೆಗಾರ ನಾಯಿಗಳೊಂದಿಗೆ ಕಾಣಿಸಿಕೊಂಡ. ಅವನ ಪಾದದ ಬಳಿ ನೀರು ಉಕ್ಕಿ ಬರುತ್ತಿತ್ತು. 'ತಗೋ, ನೀರು ಕುಡಿ' ಎಂದ ಆ ಬೇಟೆಗಾರ. ಆದರೆ ಉತ್ತಂಕಮುನಿ ಅದನ್ನು ತಿರಸ್ಕರಿಸಿದ. ಆ ಕ್ಷಣ ಅವನ ಜಾಗದಲ್ಲಿ ಕೃಷ್ಣ ನಿಂತಿದ್ದ. ಬೇಟೆಗಾರನ ಮೂಲಕ ನೀರು ಕಳುಹಿಸಿದ ಕೃಷ್ಣನನ್ನು ಆ ಮುನಿ ನಿಂದಿಸಿದ. ಆಗ ಕೃಷ್ಣ ನಗುತ್ತಾ, 'ಹಾಗೆ ಬಂದಿದ್ದವನು ದೇವೇಂದ್ರ. ನನ್ನ ಆಜ್ಞೆಯಂತೆ ನಿನಗೆ ಅಮೃತ ವನ್ನು ಕೊಡಲು ಬಂದಿದ್ದ. ದೇವೇಂದ್ರನಿಗೆ ಮಾನವರಿಗೆ ಅಮೃತ ಕೊಡುವ ಇಷ್ಟವಿರಲಿಲ್ಲ, ಅವನು ನನ್ನ ಒತ್ತಾಯದಿಂದಷ್ಟೇ ಬಂದಿದ್ದ' ಎಂದ. ತನ್ನ ಅಪರಾಧವನ್ನರಿತ ಉತ್ತಂಕನಿಗೆ ಬಹಳ ನೋವಾಯಿತು. ಇದನ್ನು ಕಂಡ ಕೃಷ್ಣ, 'ನೀನು ಯಾವಾಗ ಬೇಡಿದರೂ ಆ ದಿಕ್ಕಿನಲ್ಲಿ ಮರುಭೂಮಿಯಲ್ಲಿ ಮೋಡಗಳೇ ನಿನಗೆ ನೀರು ಕೊಡುತ್ತವೆ' ಎಂದು ಅನುಗ್ರಹಿಸಿದ.

ಆ ಮೋಡಗಳೇ ಉತ್ತಂಕ ಮೋಡಗಳು ಎಂದು ಪ್ರಸಿದ್ಧವಾಗಿವೆ. ಕೃಷ್ಣ ಮಾತಿನಂತೆ ಇಂದಿಗೂ ಬಾಯಾರಿದ ಜನರಿಗೆ ತೃಪ್ತಿಯುಂಟು ಮಾಡಲು ಉತ್ತಂಕಮುನಿ ಆ ಮೋಡಗಳನ್ನು ಪ್ರಾರ್ಥಿಸುತ್ತಾನೆ. ಆ ಮೋಡಗಳು ನೀರನ್ನಿತ್ತು ಜನರನ್ನು ಆನಂದಗೊಳಿಸುತ್ತವೆ.

*(ಸಂಗ್ರಹ: ಡಾ. ಕೆ.ಎಲ್.ಪ್ರಸನ್ನಾಕ್ಷಿ)*

# ತಾಯಾಗಿ ಬಂದಳು ರಕ್ಕಸಿ

**ಕಥೆ: ರೇವತಿ** **ಚಿತ್ರ: ಮಣಿಸೆಲ್ವನ್**













5
ಮಹಾಬಲಿ ತನ್ನ ಪತ್ನಿ ವಿಂಧ್ಯಾವಳಿ, ಮಗಳು ರತ್ನಮಾಲೆಯರೊಂದಿಗೆ ವಾಮನನ್ನು ಆದರದಿಂದ ಸ್ವಾಗತಿಸಿದ.
ಬ್ರಹ್ಮಚಾರಿಗಳಿಗೆ ಸ್ವಾಗತ. ನಿಮ್ಮ ಆಗಮನದಿಂದ ನಮ್ಮ ಗೌರವ ಹೆಚ್ಚಿದಂತಾಯಿತು.


6
ಎಂಥ ಅದ್ಭುತ ಹುಡುಗನಿವನು! ದೇವರೇ, ಮುಂದಿನ ಜನ್ಮದಲ್ಲಿ ನಾನು ಈತನ ತಾಯಿಯಾಗಿ, ಅವನನ್ನು ಸಾಕಿ ಸಲಹುವ ಭಾಗ್ಯ ನನ್ನದಾಗಲಿ.
ಓ ಚಕ್ರವರ್ತಿ! ನೀನು ಪ್ರಹ್ಲಾದನ ಮೊಮ್ಮಗನೇ ಎಂಬುದನ್ನು ನಿನ್ನ ಮಹಿಮೆಯಿಂದ ದೃಢಪಡಿಸಿದ್ದೀಯೆ. ನಿಮ್ಮೆಲ್ಲರ ಬಯಕೆಗಳೂ ಈಡೇರಲಿ!


7
ಸ್ವಾಮಿ, ನಿಮಗೇನು ಬೇಕು ಹೇಳಿ. ನಿಮ್ಮ ಬಯಕೆ ಈಡೇರಿದಾಗಲಷ್ಟೇ ಈ ಯಾಗ ಪೂರ್ಣವಾಗುವುದು.
ನನಗೆ ಬಹಳ ದೊಡ್ಡ ವಸ್ತುವೇನೂ ಬೇಡ. ನನ್ನ ಪಾದಗಳಿಂದ ಅಳೆಯಬಹುದಾದ ಮೂರು ಹೆಜ್ಜೆ ನೆಲ ಮಾತ್ರ ಸಾಕು.
ಅಷ್ಟು ಮಾತ್ರವೆ? ಅದನ್ನು ಈಗಲೇ ಕೊಟ್ಟಿದ್ದೇನೆ. ದಯವಿಟ್ಟು ಸ್ವೀಕರಿಸಿ.


8
ವಾಮನನು ತ್ರಿವಿಕ್ರಮನ ರೂಪ ಧರಿಸಿ ನಿಂತ. ತನ್ನ ಎರಡು ಹೆಜ್ಜೆಗಳಿಂದ ಇಡೀ ಭೂಮಿ, ಆಕಾಶಗಳನ್ನು ಅಳೆದ.
ಮಹಾಬಲಿ, ಮೂರನೆಯ ಹೆಜ್ಜೆಯನ್ನು ಎಲ್ಲಿಡಲಿ?

9

ಓ
ಪ್ರಹ್ಲಾದನ
ಒಡೆಯನಾದ ಭಗವಂತನೆ,
ಇಲ್ಲಿದೆ ನನ್ನ ಶಿರಸ್ಸು. ನಿಮ್ಮ
ಮೂರನೆಯ ಹೆಜ್ಜೆಗಾಗಿ
ಪಾದವನ್ನು ನನ್ನ ತಲೆಯ
ಮೇಲಿಟ್ಟು, ನನ್ನನ್ನು
ಕೃತಾರ್ಥನನ್ನಾಗಿಸಿ.

ಮಹಾಬಲಿ,
ನೀನು ಏಳು
ಮಂದಿ ಚಿರಂಜೀವಿಗಳಲ್ಲಿ
ಒಬ್ಬನಾಗುವೆ. ನೀನು
ಯಾವಾಗಲೂ ನನ್ನ
ರಕ್ಷಣೆಯಲ್ಲಿರುವೆ.

10

ತನ್ನ ತಂದೆಯನ್ನು ಕಳೆದುಕೊಂಡ ರತ್ನಮಾಲೆ ಕೆರಳಿ ಕೆಂಡವಾದಳು.

ಅದೇಕೆ
ನಾನು ಈ ದುಷ್ಟ ಹುಡುಗನ
ತಾಯಿಯಾಗಿ ಜನಿಸಬಯಸಿದೆ? ನಾನೇಕೆ
ಅವನನ್ನು ವಿಷ ನೀಡಿ ಸಾಯಿಸಬಾರದು?

11

ದಿನಗಳು ಉರುಳಿದವು. ಮಹಾವಿಷ್ಣು ದೇವಕಿಯ ಮಗ ಕೃಷ್ಣನಾಗಿ ಹುಟ್ಟಿದ; ಗೋಕುಲದಲ್ಲಿ ಯಶೋದೆ ಅವನನ್ನು ಬೆಳೆಸಿದಳು. ರತ್ನಮಾಲೆ ವಿಷ್ಣುವಿನ ಮೇಲೆ ಸೇಡು ತೀರಿಸಿಕೊಳ್ಳಲು ಕಂಸನ ಕುಲದಲ್ಲಿ ಪೂತನಿಯಾಗಿ ಜನ್ಮ ತಳೆದಳು.

ಪೂತನಿ,
ನನ್ನನ್ನು
ಕೊಲ್ಲುವುದಕ್ಕೆ ಹುಟ್ಟಿದ
ಮಗು ಗೋಕುಲದಲ್ಲಿ
ಬೆಳೆಯುತ್ತಿರುವಂತೆ
ಕಾಣಿಸುತ್ತಿದೆ.

ಹೌದು ರಾಜ, ನಾನೂ ಆ ಮಗುವಿನ ಮೇಲೆ ಸೇಡು ತೀರಿಸಿಕೊಳ್ಳಬೇಕಾಗಿದೆ. ನಾನೇ ಅವನನ್ನು ಕೊಲ್ಲುತ್ತೇನೆ. ದಯವಿಟ್ಟು ನೀನು ನನಗೆ ಆಜ್ಞೆ ನೀಡು.

ಆಗಲಿ,
ಜಯಶಾಲಿಯಾಗಿ
ಬಾ.

12

ಗೋಕುಲದಲ್ಲಿ ನಂದಗೋಪನ ಮನೆಯಲ್ಲಿ... ಪೂತನಿ ಒಬ್ಬಳು ಸುಂದರ ಯುವತಿಯ ರೂಪ ಧರಿಸಿದಳು.

ಅಮ್ಮಾ,
ಈ ಅವೇಳೆಯಲ್ಲಿ
ಬಂದಿದ್ದೀಯಲ್ಲಾ, ಯಾರು
ನೀನು?

ನನ್ನ
ಪತಿ ನನ್ನನ್ನು
ಮನೆಯಿಂದ
ಓಡಿಸಿಬಿಟ್ಟನಮ್ಮಾ. ನನ್ನ
ಮಗುವನ್ನು ನನ್ನ ಕೈಗೆ
ಅವನು ಕೊಡಲಿಲ್ಲ.

13

ಹೌದೆ?
ಅಯ್ಯೋ, ಪಾಪ. ಏನನ್ನಾದರೂ ತಿನ್ನು, ಬಾ.

ಬೇಡಮ್ಮ.
ನನಗೆ ನಿನ್ನ ಮಗು ಅಳುವ ಧ್ವನಿಯನ್ನು ಕೇಳಬೇಕೆನಿಸುತ್ತದೆ.
ನಾನು ಅವನಿಗೆ ಮೊಲೆ ಹಾಲು ಕುಡಿಸಲೆ?

ಆಗಲಿ.
ನನ್ನ ಮುದ್ದುಕಂದನಿಗೆ ಹಾಲು ಉಣಿಸಿದ ಮೇಲೆ, ನಿನ್ನ ಮಗು ನಿನಗೆ ಮರಳಿ ದೊರಕುವುದು ಎಂಬ ಭರವಸೆ ನನಗಿದೆ.

14

ಪೂತನಿ ಕೃಷ್ಣನಿಗೆ ತನ್ನ ವಿಷಪೂರಿತವಾದ ಮೊಲೆಹಾಲನ್ನು ಕುಡಿಸಿದಳು.

ಇಗೋ,
ನನ್ನ ತಂದೆಗೆ ವಂಚನೆ ಮಾಡಿದ ನಿನ್ನ ಮೇಲೆ ಈಗ ನಾನು ಸೇಡು ತೀರಿಸಿಕೊಂಡೆ, ನೋಡು!

ಕೃಷ್ಣನು ಅವಳ ಮೊಲೆಹಾಲಿನೊಂದಿಗೆ ಅವಳ ಪ್ರಾಣವನ್ನೂ ಹೀರಿದ.

15

ಅಮ್ಮಾ
ಪೂತನಿ! ಮಾತೃವಾತ್ಸಲ್ಯದಿಂದ ನೀನು ನನಗೆ ತಾಯಿಯಾಗಲು ಬಯಸಿದೆ. ಅನಂತರ ನನ್ನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದುಕೊಂಡೆ. ನೀನು ಮಾತೃಪ್ರೇಮದ ಹಿರಿಮೆಗೆ ಹಾಗೂ ರಕ್ಕಸಿಯ ಕ್ರೌರ್ಯ, ಉದ್ಧಟತನಗಳಿಗೆ ಒಳ್ಳೆಯ ಉದಾಹರಣೆ.

ಅನಂತರ ಕೃಷ್ಣ ಅವಳ ವಧೆ ಮಾಡಿದ.

16

ನಮ್ಮನ್ನು ಯಾವಾಗಲೂ ಮುಂದುವರಿದು ಹೋಗುವಂತೆ ಪ್ರೇರೇಪಿಸುತ್ತಿರುವ ಯಾವುದೋ ಒಂದು ಶಕ್ತಿಯಿದೆ. ನಿಜವಾದ ವಸ್ತುವನ್ನು ಎಲ್ಲಿ ಹುಡುಕಬೇಕೋ ನಮಗೆ ಅದು ತಿಳಿಯದು. ಅದನ್ನು ಹುಡುಕಿಕೊಂಡು ಹೋಗುವಂತೆ ಈ ಪ್ರೇಮ ಯಾವಾಗಲೂ ನಮ್ಮನ್ನು ಮುಂದಕ್ಕೆ ಕಳುಹಿಸುತ್ತಿದೆ. ಪುನಃ ಪುನಃ ನಮ್ಮ ತಪ್ಪು ನಮಗೆ ತಿಳಿಯುವುದು. ಯಾವುದನ್ನೋ ನಾವು ಹಿಡಿದುಕೊಳ್ಳುತ್ತೇವೆ, ಅದು ನಮ್ಮ ಬೆರಳುಗಳಿಂದ ನುಸುಳಿ ಹೋಗುವುದು. ಅನಂತರ ಮತ್ತೆ ಬೇರೊಂದನ್ನು ಹಿಡಿದುಕೊಳ್ಳುತ್ತೇವೆ. ಹೀಗೆ ಕೊನೆಗೆ ಬೆಳಕು ಬರುವ ತನಕ, ನಿಜವಾಗಿ ಪ್ರೀತಿಸುವ ಒಬ್ಬನೇ ದೇವರ ಹತ್ತಿರ ಬರುವ ತನಕ ಮುಂದೆ ಮುಂದೆ ಹೋಗುತ್ತೇವೆ. ಅವನ ಪ್ರೀತಿಯಲ್ಲಿ ಯಾವ ಬದಲಾವಣೆಯೂ ಇರುವುದಿಲ್ಲ. ಅವನು ಯಾವಾಗಲೂ ನಮ್ಮನ್ನು ಸ್ವೀಕರಿಸಲು ಸಿದ್ಧನಾಗಿರುವನು.

**– ಸ್ವಾಮಿ ವಿವೇಕಾನಂದ**



# ಶಿಮ್ಲಾ ರಾಮಕೃಷ್ಣ ಮಿಷನ್ ಆಶ್ರಮದಲ್ಲಿ ನಡೆದ ಕಾರ್ಯಕ್ರಮಗಳು





ಇತ್ತೀಚೆಗೆ ಆರಂಭಗೊಂಡ ಶಿಮ್ಲಾ ರಾಮಕೃಷ್ಣ ಮಿಷನ್ ಆಶ್ರಮದಲ್ಲಿ, ೨೦೧೫ ಸೆಪ್ಟೆಂಬರ್ ೧೯ ಹಾಗೂ ೨೦ ರಂದು ನಡೆದ ಎರಡು ದಿನಗಳ ಕಾರ್ಯಕ್ರಮದಲ್ಲಿ **'ಮಾನವ ಉತ್ಕೃಷ್ಟತೆ'**ಯನ್ನು ಕುರಿತು ವಿಚಾರ ಸಂಕಿರಣ ಹಾಗೂ ಭಕ್ತರಿಗಾಗಿ ಆಧ್ಯಾತ್ಮಿಕ ಶಿಬಿರ ನಡೆಯಿತು. ಆಶ್ರಮ ಆರಂಭಗೊಂಡ ಬಳಿಕ ನಡೆದ ಮೊದಲ ಸಾರ್ವಜನಿಕ ಸಭೆ ಇದಾಗಿದೆ. ದಿನಾಂಕ ೧೯ರಂದು ನಡೆದ ವಿಚಾರ ಸಂಕಿರಣದಲ್ಲಿ ೩೦ ಮಂದಿ ಯುವಕರು ಹಾಗೂ ೨೬ ಮಂದಿ ಯುವತಿಯರು ಪಾಲ್ಗೊಂಡಿದ್ದರು. ಬೆಳಿಗ್ಗೆ ೯ ರಿಂದ ಸಾಯಂಕಾಲ ೫ರವರೆಗೆ ನಡೆದ ಈ ಸಭೆಯಲ್ಲಿ ರಾಮಕೃಷ್ಣ ಮಹಾಸಂಘದ ಆಂಗ್ಲ ಮಾಸಪತ್ರಿಕೆ 'ವೇದಾಂತ ಕೇಸರಿ'ಯ ಸಂಪಾದಕರಾದ ಸ್ವಾಮಿ ಆತ್ಮಶ್ರದ್ಧಾನಂದಜಿಯವರು **'ಸ್ವಾಮಿ ವಿವೇಕಾನಂದರ ದೃಷ್ಟಿಯಲ್ಲಿ ಉತ್ಕೃಷ್ಟತೆಗಾಗಿ ಶಿಕ್ಷಣ'** ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದರು. ಅಮರಾವತಿಯ ಪಿ.ಆರ್. ಪಾಟೀಲ್ ಇಂಜಿನಿಯರಿಂಗ್ ಕಾಲೇಜಿನ ನಿರ್ದೇಶಕರಾದ ಡಾ. ಡಿ. ಬಿ. ವಾಡೆಯವರು ಸ್ವಾಮಿ ವಿವೇಕಾನಂದರ ಉಪದೇಶಗಳನ್ನು ಅನುಸರಿಸುವ ಮೂಲಕ ವಿದ್ಯಾರ್ಥಿಗಳು ಹೇಗೆ ಉತ್ಕೃಷ್ಟತೆಯನ್ನು ಸಂಪಾದಿಸಬಹುದು ಎಂಬ ವಿಷಯವನ್ನು ಕುರಿತು ಮಾತನಾಡಿದರು. ಹಿಮಾಚಲ ಪ್ರದೇಶದ ಸಹಾಯಕ ತೆರಿಗೆ ಕಾರ್ಯನಿರ್ವಾಹಕರಾದ ಶ್ರೀ ರಾಕೇಶ್ ಶರ್ಮಾ ಅವರು **'ಪ್ರಸ್ತುತ ಸಾಮಾಜಿಕ ಪರಿಸ್ಥಿತಿಯಲ್ಲಿ ನಾವು ಮಾಡಬೇಕಾದ ಕರ್ತವ್ಯ'** ಎಂಬ ವಿಷಯವಾಗಿ ಮಾತನಾಡಿದರು. ಸಂಕಿರಣದಲ್ಲಿ ವೀಡಿಯೋ ಪ್ರದರ್ಶನ, ಭಜನೆ, ಪ್ರಶ್ನೋತ್ತರಗಳು ನಡೆದವು.

ದಿನಾಂಕ ೨೦ ಸೆಪ್ಟೆಂಬರ್, ೨೦೧೫ ರಂದು ಬೆಳಿಗ್ಗೆ ೧೦ ರಿಂದ ಸಂಜೆ ೫.೧೫ರ ವರೆಗೆ ಭಕ್ತರಿಗಾಗಿ ನಡೆದ ಆಧ್ಯಾತ್ಮಿಕ ಶಿಬಿರದಲ್ಲಿ ಸುಮಾರು ೬೦ ಮಂದಿ ಭಕ್ತರು ಪಾಲ್ಗೊಂಡಿದ್ದರು. ಸ್ವಾಮಿ ಆತ್ಮಶ್ರದ್ಧಾನಂದಜಿ **'ದೈನಂದಿನ ಜೀವನದಲ್ಲಿ ವೇದಾಂತ ಸಾಧನೆ'** ಎಂಬ ವಿಷಯವಾಗಿ, ಹಾಗೂ ಶಿಮ್ಲಾ ಆಶ್ರಮದ ಕಾರ್ಯದರ್ಶಿಗಳಾದ ಸ್ವಾಮಿ ನೀಲಕಂಠಾನಂದಜಿಯವರು **'ಆಧ್ಯಾತ್ಮಿಕ ಸಾಧನೆ ಹಾಗೂ ಉನ್ನತ ಜೀವನ'** ಎಂಬ ವಿಷಯವಾಗಿ ಮಾತನಾಡಿದರು. ಸ್ವಾಮಿ ಕೃಪಾಘನಾನಂದಜಿಯವರಿಂದ ಭಜನೆ, ''Rising India'' ಎಂಬ ವಿಡಿಯೋ ಪ್ರದರ್ಶನ – ಇವು ಶಿಬಿರದ ಇತರ ಕಾರ್ಯಕ್ರಮಗಳಾಗಿದ್ದವು.

# ಮಂಗಳೂರು ಆಶ್ರಮದಲ್ಲಿ ಚಿಂತನಗೋಷ್ಠಿಗಳ ಸರಣಿ ಕಾರ್ಯಕ್ರಮ




೨೦೧೫ರ ಸೆಪ್ಟೆಂಬರ್ ೯ರಿಂದ ೧೧ ರ ವರೆಗೆ ೩ ದಿನಗಳ ಚಿಂತನಗೋಷ್ಠಿಗಳು ಮಂಗಳೂರು ರಾಮಕೃಷ್ಣ ಮಿಶನ್ ಆಶ್ರಮದ ಸಭಾಂಗಣದಲ್ಲಿ ನಡೆದವು. ದಿನಾಂಕ ೯ರಂದು ಸ್ನಾತಕೋತ್ತರ ವಿದ್ಯಾರ್ಥಿಗಳಿಗಾಗಿ ನಡೆದ ಚಿಂತನ ಗೋಷ್ಠಿಯಲ್ಲಿ **Education for life Management** ಎಂಬ ವಿಷಯದ ಬಗ್ಗೆ ; ೧೦ ರಂದು ಬಿ.ಎಡ್. ವಿದ್ಯಾರ್ಥಿಗಳಿಗಾಗಿ ನಡದ ಚಿಂತನಗೋಷ್ಠಿಯಲ್ಲಿ **'ಶಿಕ್ಷಣದ ಸಾರ'** ಎಂಬ ವಿಷಯದ ಬಗ್ಗೆ ; ಹಾಗೂ ೧೧ ರಂದು ಕಾಲೇಜು ಅಧ್ಯಾಪಕರಿಗಾಗಿ ನಡೆದ ಚಿಂತಗೋಷ್ಠಿಯಲ್ಲಿ **'ಪ್ರಾಚೀನ, ಸಮಕಾಲೀನ ಹಾಗೂ ಹೊಸ ಪೀಳಿಗೆಯ ಶಿಕ್ಷಣ ವ್ಯವಸ್ಥೆಗಳು'** ಎಂಬ ವಿಷಯದ ಬಗ್ಗೆ ಚಿಂತನೆ –ಚರ್ಚೆ ನಡೆಯಿತು. ಸ್ವಾಮಿ ಸರ್ವಸ್ಥಾನಂದಜಿ, ಸ್ವಾಮಿ ಆತ್ಮಪ್ರಿಯಾನಂದಜಿ, ಡಾ. ಬಿ.ಎಂ.ಹೆಗ್ಡೆ, ಪ್ರೊ.ರಘೋತ್ತಮರಾವ್, ಶ್ರೀ ಸುರೇಶ್ ಕುಲಕರ್ಣಿ ಹಾಗೂ ಶ್ರೀ ಬಿ.ಎಸ್.ಎನ್.ಮೂರ್ತಿ ಮೊದಲಾದವರು ವಿಷಯ ಮಂಡನೆ ಮಾಡಿ, ಚರ್ಚೆ–ಸಂವಾದಗಳಲ್ಲಿ ಪಾಲ್ಗೊಂಡರು.

ದಿನಾಂಕ ೯ ರಂದು ರಾಮಕೃಷ್ಣ ಮಹಾಸಂಘದ ಸಹ ಕಾರ್ಯದರ್ಶಿಗಳಾದ ಸ್ವಾಮಿ ಸುವೀರಾನಂದಜಿಯವರು ಚಿಂತನಗೋಷ್ಠಿಯನ್ನು ಉದ್ಘಾಟಿಸಿದರು. ೧೧ ರಂದು ನಡೆದ ಚಿಂತನಗೋಷ್ಠಿಯನ್ನು ಕರ್ನಾಟಕದ ರಾಜ್ಯಪಾಲರಾದ ಶ್ರೀ ವಾಜುಭಾಯಿ ವಾಲಾ ಅವರು ಉದ್ಘಾಟಿಸಿದರು. ಸುಮಾರು ೫೦೦ ಮಂದಿ ಸ್ನಾತಕೋತ್ತರ ವಿದ್ಯಾರ್ಥಿಗಳು, ೫೦೦ ಮಂದಿ ಬಿ.ಎಡ್. ವಿದ್ಯಾರ್ಥಿಗಳು ಹಾಗೂ ೪೮೦ ಮಂದಿ ಕಾಲೇಜು ಅಧ್ಯಾಪಕರು ಈ ಚಿಂತನಗೋಷ್ಠಿಗಳಲ್ಲಿ ಪಾಲ್ಗೊಂಡರು. ಪ್ರತಿನಿಧಿಗಳಿಗೆ ಉಪಹಾರ, ಭೋಜನ ವ್ಯವಸ್ಥೆಯಿತ್ತು ಹಾಗೂ ಗ್ರಂಥಗಳು, ಬರವಣಿಗೆ ಸಾಮಗ್ರಿಗಳನ್ನು ಹಂಚಲಾಯಿತು.

Managing Editor : Swami Muktidananda
Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

